KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೩ | ಬೆಂಗಳೂರು, ಗುರುವಾರ, ಏಪ್ರಿಲ್ ೧೭, ೨೦೦೮ (ಚೈತ್ರ ೨೮, ಶಕ ವರ್ಷ ೧೯೩೦) | ಸಂಚಿಕೆ ೧೬ |
|---|---|---|



## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಶಿಕ್ಷಣ ಸಚಿವಾಲಯ**

**ವಿಷಯ:** ಶಾಲಾ ಕಾಲೇಜುಗಳಲ್ಲಿ ಶಾಲಾವಧಿಯಲ್ಲಿ ಮೊಬೈಲ್ ಬಳಕೆಯನ್ನು ನಿಷೇಧಿಸುವ ಕುರಿತು.

**ಓದಲಾಗಿದೆ:** ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ದಿನಾಂಕ 13–9–2007ರ ಟಿಪ್ಪಣಿ ಸಂಖ್ಯೆ:ಪ್ರಾ.ಪ್ರೌ.ಶಿ.ಸ/ಹೆಚ್/715/2006.

**ಪ್ರಸ್ತಾವನೆ:**

ಮೇಲೆ ಓದಲಾದ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರ ದಿನಾಂಕ 13–9–2007ರ ಟಿಪ್ಪಣಿ ಹಾಗೂ ದಿನಾಂಕ 29–9–2007ರಂದು ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು, ಇಲಾಖೆಯ ಅಧಿಕಾರಿಗಳ ಸಭೆ ನಡೆಸಿ, ಮೊಬೈಲ್ ಉಪಯೋಗ ಶಾಲಾ ಕಾಲೇಜುಗಳಲ್ಲಿ ದಿನೇ ದಿನೇ ಹೆಚ್ಚುತ್ತಿದ್ದು, ಇದು ಶಾಲಾ ಕಾಲೇಜುಗಳಲ್ಲಿಯ ಶೈಕ್ಷಣಿಕ ವಾತಾವರಣವನ್ನು ಹದಗೆಡಿಸುತ್ತಿದ್ದು, ಇದರ ದುಷ್ಪರಿಣಾಮ ಮಕ್ಕಳ ಮೇಲೆ ಬೀರುತ್ತಿದೆಯಲ್ಲದೇ, ಇದರಿಂದ ಕಲಿಕೆಯ ಅಮೂಲ್ಯ ಸಮಯವನ್ನು ಮೊಬೈಲ್ ಮಾತುಗಾರಿಕೆಯಲ್ಲಿ ವ್ಯಯವಾಗುತ್ತಿದೆಯೆಂಬ ಅಂಶ ಇಲಾಖೆಯ ಗಮನಕ್ಕೆ ಬಂದಿದೆ. ಅಲ್ಲದೇ ವಿದ್ಯಾರ್ಥಿಗಳು ಕ್ಲಾಸಿನಲ್ಲಿ ಮೊಬೈಲ್ ಬಳಸಿ ಸಂಗೀತ ಕೇಳುವುದು ಆಟವಾಡುವುದು ಹಾಗೂ ಎಸ್‌ಎಂಎಸ್ ಕಳುಹಿಸುವುದು ಮಾಡುತ್ತಿದ್ದು, ಇದರಿಂದ ತರಗತಿಗಳಲ್ಲಿ ಅಹಿತಕರ ವಾತಾವರಣ ಉಂಟಾಗಿ ಶೈಕ್ಷಣಿಕ ಚಟುವಟಿಕೆಗಳಿಗೆ ತೊಂದರೆ ಉಂಟಾಗುತ್ತದೆ. ಇದರೊಂದಿಗೆ ಅನೇಕ ಪಾಲಕ–ಪೋಷಕರು ಕೂಡಾ ಈ ಕುರಿತು ಅನೇಕ ಸಂದರ್ಭಗಳಲ್ಲಿ ಆತಂಕ ವ್ಯಕ್ತಪಡಿಸಿರುತ್ತಾರೆಂಬ ಅಂಶ ಸಭೆಯಲ್ಲಿ ಚರ್ಚೆಯಾಗಿ ಮಕ್ಕಳ ಕಲಿಕಾ ಸಮಯದ ರಕ್ಷಣೆಯ ಕ್ರಮವಾಗಿ ಮೊಬೈಲ್ ಉಪಯೋಗವನ್ನು ನಿಷೇಧಿಸಬೇಕೆಂಬ ಒಟ್ಟಾರೆ ಅಭಿಪ್ರಾಯ ಈ ಸಭೆಯಲ್ಲಿ ವ್ಯಕ್ತವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 226 ಎಲ್‌ಐಬಿ 2007, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್, 2007**

2. ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಒಂದನೇ ತರಗತಿಯಿಂದ 12ನೇ ತರಗತಿಯವರೆಗೆ (1 ರಿಂದ 10ನೇ ತರಗತಿ ಹಾಗೂ ಪ್ರಥಮ ಮತ್ತು ದ್ವಿತೀಯ ಪಿಯುಸಿ) ರಾಜ್ಯದ ಎಲ್ಲಾ ಸರ್ಕಾರಿ, ಅನುದಾನಿತ ಹಾಗೂ ಅನುದಾನ ರಹಿತ ಪ್ರತಿಯೊಂದು ಶಾಲಾ–ಕಾಲೇಜುಗಳ ವಿದ್ಯಾರ್ಥಿಗಳಿಗೆ ಅನ್ವಯಿಸುವಂತೆ ತಕ್ಷಣದಿಂದ ಜಾರಿಗೆ ಬರುವಂತೆ, ಮೊಬೈಲ್‌ನ್ನು ಶಾಲಾವಧಿಯಲ್ಲಿ, ಶಾಲಾ ಕಾಲೇಜುಗಳ ಆವರಣದಲ್ಲಿ ಉಪಯೋಗಿಸುವುದನ್ನು ನಿಷೇದಿಸಲಾಗಿದೆ. ಇದರೊಂದಿಗೆ ಶಾಲಾ ಕಾಲೇಜುಗಳ ಶಿಕ್ಷಕರು, ಉಪನ್ಯಾಸಕರು ಹಾಗೂ ಯಾವುದೇ ಸಿಬ್ಬಂದಿ ವರ್ಗದವರು ಕೂಡಾ ಶಾಲಾವಧಿಯಲ್ಲಿ, ಶಾಲಾ ಕಾಲೇಜುಗಳ ಆವರಣದಲ್ಲಿ ಮೊಬೈಲ್ ಬಳಸುವುದನ್ನು ನಿಷೇದಿಸಲಾಗಿದೆ. ನಿಷೇಧವನ್ನು ಉಲ್ಲಂಘಿಸಿ ವಿದ್ಯಾರ್ಥಿಗಳು, ಶಿಕ್ಷಕರು–ಉಪನ್ಯಾಸಕರು ಹಾಗೂ ಸಿಬ್ಬಂದಿಯವರು ಶಾಲಾವಧಿಯಲ್ಲಿ, ಶಾಲಾ ಆವರಣದಲ್ಲಿ ಮೊಬೈಲ್ ಬಳಸಿದಲ್ಲಿ ಅಂತಹ ಮೊಬೈಲ್‌ಗಳನ್ನು ಮುಟ್ಟುಗೋಲು ಹಾಕಿಕೊಳ್ಳತಕ್ಕದ್ದು. ಈ ನಿಷೇದವನ್ನು ಅನುಷ್ಠಾನಗೊಳಿಸಲು ಅನುಷ್ಠಾನ ಸಮಿತಿಯನ್ನು ರಚಿಸಿ, ಅವುಗಳ ಜವಾಬ್ದಾರಿ / ಅಧಿಕಾರ ವ್ಯಾಪ್ತಿ ನಿಗದಿಪಡಿಸಿದೆ.

3. ಅನುಷ್ಠಾನ ಸಮಿತಿ:– ಮೇಲಿನ ಆದೇಶವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಪ್ರತಿಯೊಂದು ಶಾಲಾ ಕಾಲೇಜಿನ ಮಟ್ಟದಲ್ಲಿ ಶಾಲಾ ಕಾಲೇಜುಗಳ ಮುಖ್ಯಸ್ಥರ ಅಧ್ಯಕ್ಷತೆಯಲ್ಲಿ ಒಂದು ಮುಟ್ಟುಗೋಲು ಸಮಿತಿಯನ್ನು ರಚಿಸುವುದು. ಈ ಸಮಿತಿಯ ರಚನೆ ಕೆಳಗಿನಂತಿರುತ್ತದೆ.

1. ಶಾಲೆ/ಕಾಲೇಜಿನ ಮುಖ್ಯಸ್ಥರು – ಅಧ್ಯಕ್ಷರು
2. ಶಾಲೆ/ಕಾಲೇಜಿನ ಒಬ್ಬ ಹಿರಿಯ ಶಿಕ್ಷಕರು/ಉಪನ್ಯಾಸಕರು – ಸದಸ್ಯರು
3. ದೈಹಿಕ ಶಿಕ್ಷಕರು – ಸದಸ್ಯರು

4. ಸಮಿತಿಯ ಅಧಿಕಾರ ವ್ಯಾಪ್ತಿ:–

1. ಈ ಸಮಿತಿಯ ಸದಸ್ಯರೆಲ್ಲರು ಶಾಲಾ / ಕಾಲೇಜುಗಳ ಆವರಣದೊಳಗೆ ಶಾಲಾ ಅವಧಿಯಲ್ಲಿ ಯಾರೂ ಮೊಬೈಲ್ ತರದಂತೆ ತಡೆಗಟ್ಟುವುದು.
2. ಈ ಬಗ್ಗೆ ಎಲ್ಲಾ ವಿದ್ಯಾರ್ಥಿಗಳಿಗೆ ಹಾಗೂ ಸಿಬ್ಬಂದಿಯವರಿಗೆ ಸೂಚನೆ ಮೂಲಕ ತಿಳುವಳಿಕೆ ನೀಡುವುದು.
3. ಸೂಚನಾ ಫಲಕದ ಮೇಲೆ ಈ ವಿಷಯ ಪ್ರಮುಖವಾಗಿ ಪ್ರಕಟಿಸುವುದು
4. ಮಕ್ಕಳ ಪಾಲಕ–ಪೋಷಕರ ಗಮನ ಸೆಳೆಯುವುದು
5. ನಿಷೇದವಿದ್ದರು ಬಳಕೆಯಾಗುವ ಸನ್ನಿವೇಶಗಳಲ್ಲಿ ಮುಟ್ಟುಗೋಲು ಹಾಕುವುದು
6. ಈ ಕುರಿತು ಸಂದರ್ಭಗನುಗುಣವಾಗಿ ತಕ್ಷಣದ ಅಧಿಕಾರಿಗಳಿಗೆ ವರದಿ ಮಾಡುವುದು.
7. ಅವಶ್ಯವೆಂದಲ್ಲಿ ಭಾರತ ಸಂಚಾರ ನಿಗಮ (B.S.N.L.) ಇವರಿಗೆ ಪತ್ರ ಬರೆದು ದೂರವಾಣಿ ಬೂಥ್ (Coin Box) ಸ್ಥಾಪಿಸಲು ಕೋರುವುದು.

5. ರಾಜ್ಯದ ಪ್ರತಿಯೊಂದು ಜಿಲ್ಲೆಯ ಉಪನಿರ್ದೇಶಕರು (ಆಡಳಿತ) ಹಾಗೂ ಉಪನಿರ್ದೇಶಕರು (ಪದವಿ ಪೂರ್ವ ಶಿಕ್ಷಣ) ರವರುಗಳಲ್ಲಿ ತಮ್ಮ ಅಧೀನದ ಅಧಿಕಾರಿಗಳೊಂದಿಗೆ ತಮ್ಮ ಅಧೀನ ಶಾಲಾ/ಕಾಲೇಜುಗಳಿಗೆ ಭೇಟಿ ನೀಡಿದಾಗ ಮೊಬೈಲ್ ಬಳಕೆ / ಉಪಯೋಗದ ಬಗ್ಗೆ ಹೊರಡಿಸಿದ ನಿಷೇದ ಆದೇಶವನ್ನು ಅನುಷ್ಠಾನಗೊಳಿಸುವ ಹಾಗೂ ಕಾಲ ಕಾಲಕ್ಕೆ ವರದಿ ಮಾಡುವ ಅಧಿಕಾರ ಹೊಂದಿರುತ್ತಾರೆ. ರಾಜ್ಯದ ಎಲ್ಲಾ ಹಂತದ ಅಧಿಕಾರಿಗಳು ಮೇಲಿನ ನಿಷೇಧವನ್ನು ಕಡ್ಡಾಯವಾಗಿ ಅನುಷ್ಠನಗೊಳಿಸಲು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಪಿ.ಆರ್. 1830

ಸರ್ಕಾರದ ಅಧೀನ ಕಾರ್ಯದರ್ಶಿಗಳು

ಶಿಕ್ಷಣ ಇಲಾಖೆ.

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರು ನಗರ ಜಿಲ್ಲೆಯಲ್ಲಿರುವ ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯವನ್ನು ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ: ಸಕಇ 30 ಅಸಂಯೋ 2001, ದಿನಾಂಕ 31–8–2001

**2.** ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ, ಇವರ ಏಕರೂಪ ಕಡತ ಸಂಖ್ಯೆ: ಅಸಂನಿ/ವಿನಿ/ಸಿಆರ್ 11/2003–04.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ 31–8–2001ರ ಆದೇಶದಲ್ಲಿ 50 ಸಂಖ್ಯಾಬಲದ ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ, ಬೆಂಗಳೂರು ಜಿಲ್ಲೆಗೆ ಮಂಜೂರು ಮಾಡಲಾಗಿದೆ.

ಕ್ರಮ ಸಂಖ್ಯೆ (2)ರಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಏಕರೂಪ ಕಡತದಲ್ಲಿ ಪ್ರಸ್ತಾವನೆ ಸಲ್ಲಿಸಿ, ಸದರಿ ವಿದ್ಯಾರ್ಥಿನಿಲಯವನ್ನು ಬೆಂಗಳೂರು ನಗರ ಬಿ.ಟಿ.ಎಂ. ಲೇಔಟ್‌ನಲ್ಲಿ ದಿನಾಂಕ 14–6–2002 ರಿಂದ ಪ್ರಾರಂಭಿಸಿ ವಿದ್ಯಾರ್ಥಿನಿಲಯವನ್ನು ನಡೆಸಲಾಗುತ್ತಿದ್ದು, 2005–06ನೇ ಸಾಲಿನಲ್ಲಿ ಸಾಕಷ್ಟು ವಿದ್ಯಾರ್ಥಿಗಳು ಸಿಗದ ಕಾರಣ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸುವುದಿಲ್ಲ, ಕಾರಣ ಈ ವಿದ್ಯಾರ್ಥಿನಿಲಯವನ್ನು ಲಭ್ಯವಿರುವ ಆರ್.ಟಿ. ನಗರ ಸುಲ್ತಾನಪಾಳ್ಯ, ಮೈಸೂರು ರಸ್ತೆ ಇತರೆ ಭಾಗದಲ್ಲಿ ವಿದ್ಯಾರ್ಥಿನಿಲಯಕ್ಕೆ ಸೂಕ್ತ ಕಟ್ಟಡ ಹುಡುಕಿ ನಿಲಯವನ್ನು ಪ್ರಾರಂಭಿಸಲು ತಿಳಿಸಲಾಗಿತ್ತು.

ಈ ಬಗ್ಗೆ 2006–07ನೇ ಸಾಲಿನ ಬೆಂಗಳೂರು ಉತ್ತರ ತಾಲ್ಲೂಕು ಕಾವಲಬೈರಸಂದ್ರ ಬೃಂದಾವನ ಬಡಾವಣೆಯಲ್ಲಿ ಸೂಕ್ತವಾದ ಕಟ್ಟಡವನ್ನು ಹುಡುಕಿ ನಿಲಯವನ್ನು ಪ್ರಾರಂಭಿಸಲು ವಿದ್ಯಾರ್ಥಿಗಳಿಗಾಗಿ ಶಾಲೆಗಳ ಮುಖ್ಯೋಪಾಧ್ಯಾಯರನ್ನು ಹಾಗೂ ಪೋಷಕರನ್ನು ಸಂಪರ್ಕಿಸಿ ವಿದ್ಯಾರ್ಥಿಗಳನ್ನು ವಿದ್ಯಾರ್ಥಿನಿಲಯಕ್ಕೆ ಸೇರಿಸಲು ಆಸಕ್ತಿ ತೋರಿಸಿದ ಕಾರಣ ವಿದ್ಯಾರ್ಥಿಗಳು ಲಭ್ಯವಿಲ್ಲದೆ ನಿಲಯವನ್ನು ಪ್ರಾರಂಭಿಸಲು ಸಾಧ್ಯವಾಗಿರುವುದಿಲ್ಲ. ತಿಳಿಸಿ ಈ ಪ್ರಯುಕ್ತ ಬೆಂಗಳೂರು ಉತ್ತರ ತಾಲ್ಲೂಕಿನ 50 ಸಂಖ್ಯಾಬಲದ ಒಂದು ಅಲ್ಪಸಂಖ್ಯಾತರ ಮೆಟ್ರಿಕ್ ಬಾಲಕಿಯರ

ವಿದ್ಯಾರ್ಥಿನಿಲಯವು ನಡೆಯುತ್ತಿದ್ದು, ಈ ವಿದ್ಯಾರ್ಥಿನಿಲಯಕ್ಕೆ ಪ್ರತಿ ವರ್ಷ 50 ರಿಂದ 60 ಅರ್ಜಿಗಳು ಪ್ರವೇಶ ಕೋರಿ ಬರುತ್ತಿದ್ದು, ಅಭ್ಯರ್ಥಿಗಳಿಗೆ ಸ್ಥಳಾವಕಾಶ ನೀಡಲಾಗುತ್ತಿಲ್ಲ ಪ್ರತಿ ವರ್ಷ ಪ್ರವೇಶ ದೊರಕದೆ ಬಾಕಿ ಉಳಿದಿರುವ ಎಲ್ಲಾ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯದಲ್ಲಿ ಪ್ರವೇಶಾವಕಾಶ ನೀಡಲು ಸಾಧ್ಯವಾಗುತ್ತಿಲ್ಲದ ಕಾರಣ ಸದರಿ ವಿದ್ಯಾರ್ಥಿನಿಲಯವನ್ನು ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸುವಂತೆ ಕೋರಿರುತ್ತಾರೆ.

ಅದರಂತೆ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಸಕಇ 238 ಅಸಂಯೋ 2007, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್, 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಬೆಂಗಳೂರು ನಗರ ಜಿಲ್ಲೆಯಲ್ಲಿರುವ ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯವನ್ನು ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ಮಂಜೂರಾತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ 10–7–1996ರಲ್ಲಿ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಬಾಟೆ**

ಪಿ.ಆರ್. 1838

ಸರ್ಕಾರದ ಅಧೀನ ಕಾರ್ಯದರ್ಶಿ

ಸಮಾಜ ಕಲ್ಯಾಣ ಇಲಾಖೆ.

**ವಿಷಯ:** ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಗುರುತಿಸಲು ರಚಿಸಲಾದ ಸಮಿತಿಯನ್ನು ಭಾಗಶಃ ಮಾರ್ಪಡಿಸುವ ಬಗ್ಗೆ.

**ಓದಲಾಗಿದೆ:**

**1.** ಸರ್ಕಾರಿ ಆದೇಶ ಸಂಖ್ಯೆ: ಸಕಇ 22 ಎಸ್‌ಡಿಸಿ 2000, ದಿನಾಂಕ 14–10–03

**2.** ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ: ದೇಹಿನಿ/ಗುಕ/ಸಪುರ/ಸಿಆರ್/2006–07, ದಿನಾಂಕ 25–11–06

**3.** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ಇವರ ಪತ್ರ ಸಂ: ಕಅಅನಿ/ಮು/2007–08, ದಿನಾಂಕ 12–6–07

**4.** ವ್ಯವಸ್ಥಾಪಕ ನಿರ್ದೇಶಕರು, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ:ಡಾಬಿಆರ್‌ಅಂಅನಿ/ಗಂಕಯೋ/2007–08, ದಿನಾಂಕ 6–7–07

**ಪ್ರಸ್ತಾವನೆ:**

ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಫಲಾನುಭವಿಗಳನ್ನು ಆಯ್ಕೆಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ಸಂಖ್ಯೆ: ಸಕಇ 22 ಎಸ್‌ಡಿಸಿ 2000, ದಿನಾಂಕ 14–10–03ರಲ್ಲಿ ಆಯ್ಕೆ ಸಮಿತಿಯನ್ನು ವಿಧಾನಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯಲ್ಲಿ ರಚಿಸಿ, ಆದೇಶ ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 25–11–06ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಇವರು ಆಯ್ಕೆ ಸಮಿತಿಯಲ್ಲಿ ನೇಮಕ ಮಾಡಿರುವ ಸದಸ್ಯರ ಪೈಕಿ ಜಿಲ್ಲಾ ಅರಣ್ಯಾಧಿಕಾರಿಗಳು ಜಿಲ್ಲಾ ಮಟ್ಟದ ಅಧಿಕಾರಿಯಾಗಿರುವುದರಿಂದ, ಜಿಲ್ಲೆಯಲ್ಲಿ ಬರುವ ಎಲ್ಲಾ ವಿಧಾನಸಭಾ ಕ್ಷೇತ್ರಗಳ ಆಯ್ಕೆ ಸಮಿತಿಯ ಸಭೆಯಲ್ಲಿ ಭಾಗವಹಿಸಲು ಸಾಧ್ಯವಾಗದಿರುವುದರಿಂದ, ಇವರ ಬದಲಾಗಿ ಸ್ಥಳೀಯ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು / ವಲಯ ಅರಣ್ಯಾಧಿಕಾರಿಗಳನ್ನು ನೇಮಕ ಮಾಡಲು ಹಾಗೂ ಗಂಗಾ ಕಲ್ಯಾಣ ಯೋಜನೆಯ ಫಲಾನುಭವಿಗಳು ಕೃಷಿಗೆ ಹೊಂದಿಕೊಂಡಂತೆ ಕೃಷಿಗೆ ಪೂರಕವಾದ ಚಟುವಟಿಕೆಗಳನ್ನು ಕೈಗೊಂಡು ಆರ್ಥಿಕ ಅಭಿವೃದ್ಧಿ ಹೊಂದುವ ನಿಟ್ಟಿನಲ್ಲಿ ಸಲಹೆ ನೀಡಿ ಪ್ರೇರೇಪಿಸಲು ಮೀನುಗಾರಿಕೆ ಹಾಗೂ ರೇಷ್ಮೆ ಇಲಾಖೆಯ ಅಧಿಕಾರಿಗಳನ್ನು ಸಮಿತಿಯಲ್ಲಿ ಸೇರ್ಪಡೆ ಮಾಡಿ ಗಂಗಾ ಕಲ್ಯಾಣ ಯೋಜನೆಯ ಅನುಷ್ಠಾನಕ್ಕೆ ನೇರವಾಗಿ ಸಂಬಂಧಿಸದ ಕೆಲವು ಅಧಿಕಾರಿಗಳನ್ನು ಸಮಿತಿಯಿಂದ ಕೈಬಿಟ್ಟು ಪುನರ್ ರಚಿಸುವಂತೆ ಕೋರಲಾಗಿತ್ತು ಎಂದು ತಿಳಿಸುತ್ತಾ ಸರ್ಕಾರಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಮೇಲೆ ಪ್ರಸ್ತಾಪಿಸಿದ ಸಮಿತಿಗೆ ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಜಿಲ್ಲಾ ಅರಣ್ಯ ಅಧಿಕಾರಿಗಳು, ಸಹಾಯಕ ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಬದಲಿಗೆ ಸಹಾಯಕ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ಇಲಾಖೆ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಸಹಾಯಕ ನಿರ್ದೇಶಕರು, ಮೀನುಗಾರಿಕೆ ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ ಇವರುಗಳನ್ನು ಆಯ್ಕೆ ಸಮಿತಿಯ ಸದಸ್ಯರನ್ನಾಗಿ ಮಾಡಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ಇವರು ಕೋರಿದ್ದಾರೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಸೂಚಿಸಿರುವ ಅಧಿಕಾರಿಗಳನ್ನು ಸದಸ್ಯರನ್ನಾಗಿ ನೇಮಿಸುವುದರ ಜೊತೆಗೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಹಿರಿಯ

ಭೂ ವಿಜ್ಞಾನಿಗಳು ಅಥವಾ ಅವರ ಪ್ರತಿನಿಧಿಯಾಗಿ ಭೂ ವಿಜ್ಞಾನ ಶಾಸ್ತ್ರದ ಪರಿಣಿತ ಅಧಿಕಾರಿಯನ್ನು ಆಯ್ಕೆ ಸಮಿತಿಯ ಸದಸ್ಯರನ್ನಾಗಿ ನೇಮಿಸಿದ್ದಲ್ಲಿ ಆಯ್ಕೆ ಸಮಿತಿಯು ಪರಿಣಾಮಕಾರಿಯಾಗಿ ಫಲಾಪೇಕ್ಷಿಗಳ ಆಯ್ಕೆ ಮಾಡಲು ಹಾಗೂ ಯೋಜನೆಯ ಫಲಪ್ರದ ಅನುಷ್ಠಾನಕ್ಕೆ ಸಂಬಂಧಿಸಿದಂತೆ ವೈಜ್ಞಾನಿಕ ನೆಲೆಗಟ್ಟಿನಲ್ಲಿ ಸೂಕ್ತ ಸಲಹೆ ಹಾಗೂ ಮಾರ್ಗದರ್ಶನ ನೀಡಲು ಸಹಕಾರಿಯಾಗುತ್ತದೆ ಎಂದು ವ್ಯವಸ್ಥಾಪಕ ನಿರ್ದೇಶಕರು, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರು ಸಲಹೆ ಮಾಡಿದ್ದಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 90 ಎಸ್‌ಡಿಸಿ 2007, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ, ಶ್ರೀ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ಇವುಗಳು ಅನುಷ್ಠಾನಗೊಳಿಸುತ್ತಿರುವ ಗಂಗಾ ಕಲ್ಯಾಣ ಯೋಜನೆಗೆ ಫಲಾನುಭವಿಗಳನ್ನು ಆಯ್ಕೆ ಮಾಡುವ ಸಲುವಾಗಿ ಸರ್ಕಾರಿ ಆದೇಶ ಸಂಖ್ಯೆ: ಸಕಇ 22 ಎಸ್‌ಡಿಸಿ 2000, ದಿನಾಂಕ 14–10–03ರಲ್ಲಿ ರಚಿಸಲಾದ ಆಯ್ಕೆ ಸಮಿತಿಯ ಸದಸ್ಯರುಗಳ ಪೈಕಿ ಈ ಕೆಳಕಂಡಂತೆ ಭಾಗಶಃ ಮಾರ್ಪಡಿಸಿ ಆದೇಶ ಹೊರಡಿಸಿದೆ.

| ಕೈಬಿಡಲು ಪ್ರಸ್ತಾಪಿಸಿದ ಅಧಿಕಾರಿಗಳ ಪದನಾಮ | ಸೇರ್ಪಡೆಗೊಂಡ ಅಧಿಕಾರಿಗಳ ಪದನಾಮ |
|---|---|
| 5) ಸಹಾಯಕ ಕಾರ್ಯಪಾಲ ಅಭಿಯಂತರರು, ಲೋಕೋಪಯೋಗಿ ಇಲಾಖೆ | ಸಹಾಯಕ ಕಾರ್ಯಪಾಲ ಅಭಿಯಂತರರು, ಸಣ್ಣ ನೀರಾವರಿ ಇಲಾಖೆ (ತಾಲ್ಲೂಕು ಕೇಂದ್ರಸ್ಥಾನ) |
| 6) ಸಹಾಯಕ ಕಾರ್ಯಪಾಲ ಅಭಿಯಂತರರು, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ) | ಸಹಾಯಕ ಕಾರ್ಯಪಾಲ ಅಭಿಯಂತರರು, ಕರ್ನಾಟಕ ವಿದ್ಯುಚ್ಛಕ್ತಿ ಪ್ರಸರಣ ನಿಗಮ ನಿಯಮಿತ (ತಾಲ್ಲೂಕು ಕೇಂದ್ರಸ್ಥಾನ) |
| 7) ತಾಲ್ಲೂಕಿನ ಸಹಾಯಕ ನಿರ್ದೇಶಕರು, ಕೈಗಾರಿಕಾ ಇಲಾಖೆ | ಸಹಾಯಕ ನಿರ್ದೇಶಕರು, ಮೀನುಗಾರಿಕೆ ಇಲಾಖೆ / ಸಹಾಯಕ ನಿರ್ದೇಶಕರು, ರೇಷ್ಮೆ ಇಲಾಖೆ |
| 11) ಜಿಲ್ಲೆಯ ಅರಣ್ಯಾಧಿಕಾರಿಗಳು | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು / ವಲಯ ಅರಣ್ಯಾಧಿಕಾರಿಗಳು (ತಾಲ್ಲೂಕು ಕೇಂದ್ರಸ್ಥಾನ)<br>**ಹೊಸದಾಗಿ ಸೇರ್ಪಡೆ**<br>ಹಿರಿಯ ಭೂ ವಿಜ್ಞಾನಿ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಅಥವಾ ಭೂ ವಿಜ್ಞಾನದಲ್ಲಿ ಪರಿಣಿತ ಹೊಂದಿದ ಅವರ ಪ್ರತಿನಿಧಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1839

**ಶಿಕ್ಷಣ ಸಚಿವಾಲಯ**

**ವಿಷಯ:** ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿದ್ದು, ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಸೇವಾ ವಿಲೀನಗೊಂಡ ಉಪನ್ಯಾಸಕರುಗಳ ಸೇವಾ ಸಕ್ರಮಾತಿಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 193 ಡಿಪಿಐ 2006, ದಿನಾಂಕ 29–12–2006

**2.** ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 179 ಡಿಪಿಐ 2006, ದಿನಾಂಕ 4–7–2007

**3.** ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಪೂಶಿಇ/ ಸಿಬ್ಬಂದಿ–2/ಅಕಾಉನೇ/2006–07, ದಿನಾಂಕ 10–7–2007.

**ಪ್ರಸ್ತಾವನೆ:**

ದಿನಾಂಕ 15–12–2003ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 86 ಡಿಪಿಐ 1996 ಹಾಗೂ ದಿನಾಂಕ 31–12–2005ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 531 ಡಿಪಿಐ 2004ರಲ್ಲಿ ಕರ್ನಾಟಕ ನಾಗರೀಕ ಸೇವಾ (ಅರೆಕಾಲಿಕ ಉಪನ್ಯಾಸಕರಾಗಿ ಕೆಲಸ ಮಾಡುತ್ತಿರುವ ವ್ಯಕ್ತಿಗಳನ್ನು ಕರ್ನಾಟಕ ಸಾಮಾನ್ಯ ಸೇವೆಗಳು (ಪದವಿ ಪೂರ್ವ ಶಿಕ್ಷಣ ಇಲಾಖೆ) ಇದರಲ್ಲಿ ವಿಲೀನಗೊಳಿಸುವುದು (ವಿಶೇಷ) ನಿಯಮಾವಳಿಗಳು, 1997ರ ನಿಯಮಗಳಲ್ಲಿ ಆಸ್ಪದ ಕಲ್ಪಿಸಿರುವಂತೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಒಟ್ಟು 80 ಅರೆಕಾಲಿಕ ಉಪನ್ಯಾಸಕರನ್ನು ಮೇಲೆ (1) ಮತ್ತು (2)ರಲ್ಲಿ ಓದಲಾದ ಅಧಿಸೂಚನೆಗಳಲ್ಲಿ ಕೆಲವೊಂದು

ಷರತ್ತುಗಳಿಗೊಳಪಟ್ಟು ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಸೇವಾ ವಿಲೀನಗೊಳಿಸಲಾಗಿದೆ. ಮೇಲೆ ಓದಲಾದ (3)ರ ದಿನಾಂಕ 10–7–2007ರ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಸದರಿ 80 ಉಪನ್ಯಾಸಕರನ್ನು ಕೌನ್ಸಲಿಂಗ್ ಮೂಲಕ ಸ್ಥಳ ನಿಯುಕ್ತಿಗೊಳಿಸಲು ದಿನಾಂಕ 22–3–2007, 25–5–2007 ಮತ್ತು 9–7–2007ರಂದು ದಿನಾಂಕಗಳನ್ನು ನಿಗದಿಪಡಿಸಿದ್ದು, ಸದರಿ ಮೂರು ಕೌನ್ಸಲಿಂಗ್‌ಗಳಿಗೂ 12 ಉಪನ್ಯಾಸಕರು ಹಾಜರಾಗದೇ ಇರುವುದರಿಂದ ಹಾಗೂ ಅವರಿಂದ ಯಾವುದೇ ರೀತಿಯ ಮನವಿ / ಮಾಹಿತಿ ಬಾರದೇ ಇರುವುದರಿಂದ ಇವರಿಂದ ಯಾವುದೇ ಪ್ರತಿಕ್ರಿಯೆ ಇಲ್ಲದಿರುವ ಕಾರಣ ಸದರಿ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 193 ಡಿಪಿಐ 2006, ದಿನಾಂಕ 29–12–2006ರ ಕಂಡಿಕೆ–2ರಲ್ಲಿ ಈ ಕೆಳಕಂಡಂತೆ ಸೂಚನೆಗಳನ್ನು ನೀಡಲಾಗಿದೆ:–

"ಈ ಆದೇಶದನ್ವಯ ಸೇವಾ ವಿಲೀನ ಪಡೆಯುವ ಅರೆಕಾಲಿಕ ಉಪನ್ಯಾಸಕರು ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಹೊರಡಿಸಿದ ಸ್ಥಳ ನಿಯುಕ್ತಿ ಆದೇಶ ಸ್ವೀಕರಿಸಿದ 15 ದಿನಗಳ ಒಳಗಾಗಿ ಸ್ಥಳ ನಿಯುಕ್ತಿಗೊಳಿಸಲಾದ ಕಾಲೇಜಿನಲ್ಲಿ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಇವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ."

3. ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 388 ಡಿಪಿಐ 2007, ದಿನಾಂಕ 4ನೇ ಅಕ್ಟೋಬರ್, 2007**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ದಿನಾಂಕ 29–12–2006ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 193 ಡಿಪಿಐ 2006ರಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಒಟ್ಟು 75 ಅರೆಕಾಲಿಕ ಉಪನ್ಯಾಸಕರುಗಳಲ್ಲಿ ಈ ಆದೇಶದ ಅನುಬಂಧದೊಂದಿಗೆ ಲಗತ್ತಿಸಿರುವ 12 ಉಪನ್ಯಾಸಕರುಗಳ ಸೇವಾ ಸಕ್ರಮಾತಿಯನ್ನು ರದ್ದುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–1, 2).

**ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 388 ಡಿಪಿಐ 2007, ದಿನಾಂಕ 4–10–2007ಕ್ಕೆ ಅನುಬಂಧ**

| ಕ್ರ. ಸಂಖ್ಯೆ | ಸರ್ಕಾರದ ದಿನಾಂಕ 29–12–2006ರ ಅನುಬಂಧದಲ್ಲಿನ ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ವಿಷಯ |
|---|---|---|---|
| 1. | 1 | ಎಂ. ಸೀತಾಲಕ್ಷ್ಮಿ, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು | ತರ್ಕಶಾಸ್ತ್ರ |
| 2. | 2 | ಬಿ.ಆರ್. ಅಪರ್ಣ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಂತಾಮಣಿ, ಕೋಲಾರ ಜಿಲ್ಲೆ | ತರ್ಕಶಾಸ್ತ್ರ |
| 3. | 3 | ಕೆ.ಆರ್. ಮಹದೇವಯ್ಯ, ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಮಂಡ್ಯ | ವಾಣಿಜ್ಯಶಾಸ್ತ್ರ |
| 4. | 12 | ಶ್ರೀನಿವಾಸ್‌ಶೆಟ್ಟಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಶಂಕರನಾರಾಯಣ, ಉಡುಪಿ ಜಿಲ್ಲೆ | ವಾಣಿಜ್ಯಶಾಸ್ತ್ರ |
| 5. | 22 | ಕೆ. ಗೋಪಾಲಕೃಷ್ಣ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಉಡುಪಿ, ಉಡುಪಿ ಜಿಲ್ಲೆ | ವಾಣಿಜ್ಯಶಾಸ್ತ್ರ |
| 6. | 23 | ಡಿ. ಗೋವಿಂದಪ್ಪ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಾವಗಡ, ತುಮಕೂರು ಜಿಲ್ಲೆ | ವಾಣಿಜ್ಯಶಾಸ್ತ್ರ |
| 7. | 29 | ಬಿ.ಎಲ್. ಪ್ರಕಾಶ್, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೆ.ಆರ್. ಪುರಂ, ಬೆಂಗಳೂರು | ವಾಣಿಜ್ಯಶಾಸ್ತ್ರ |
| 8. | 38 | ಟಿ.ಆರ್. ಜಯರಾಮಯ್ಯ, ಸರ್ಕಾರಿ ಮಹಾರಾಣಿ ವಿಜ್ಞಾನ ಕಾಲೇಜು, ಬೆಂಗಳೂರು | ಭೌತಶಾಸ್ತ್ರ |
| 9. | 39 | ಕಲಕಪ್ಪ ಗಾಣಿಗೇರ್, ಸರ್ಕಾರಿ ಬಿ.ಜಿ.ಜಿ. ಪ್ರಥಮ ದರ್ಜೆ ಕಾಲೇಜು, ರೋಣ, ಗದಗ ಜಿಲ್ಲೆ | ಭೌತಶಾಸ್ತ್ರ |

| | | | |
|---|---|---|---|
| 10. | 42 | ಕೆ.ಎನ್. ವೆಂಕಟಾಚಲಯ್ಯ, ಸರ್ಕಾರಿ ಮಹಿಳಾ ಕಾಲೇಜು, ಕೋಲಾರ, ಕೋಲಾರ ಜಿಲ್ಲೆ | ಭೌತಶಾಸ್ತ್ರ |
| 11. | 53 | ಬಿ.ಎಸ್. ತಿಪ್ಪೇಶ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ | ರಸಾಯನಶಾಸ್ತ್ರ |
| 12. | 63 | ಟಿ. ಸುಮನಾ, ಸರ್ಕಾರಿ ವಿಜ್ಞಾನ ಕಾಲೇಜು, ತುಮಕೂರು | ರಸಾಯನಶಾಸ್ತ್ರ |

**ಎಂ.ಎಂ. ಹಿರೇಮಠ**

ಪಿ.ಆರ್. 1845 ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–1, 2).

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕು ದೊಡ್ಡಸಿದ್ದವ್ವನಹಳ್ಳಿಯಿಂದ ಸಿಟಿಎಂ ರಸ್ತೆಯವರೆಗಿನ ಹಳ್ಳಿ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ:ಮುಇಂ:ಸಂಕದ:ರಶಾ:ಸಇಂ–1:ಮೇಲ್ದರ್ಜೆ:2007–08, ದಿನಾಂಕ 26–6–2007.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲ್ಲೂಕಿನ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ದೊಡ್ಡಸಿದ್ದವ್ವನಹಳ್ಳಿಯಿಂದ ಸಿಟಿಎಂ ರಸ್ತೆ ಮಾರ್ಗ ಹಂಪಯ್ಯನಮಾಳಿಗೆ, ಬೊಮ್ಮಯ್ಯನಹಳ್ಳಿ ಸಾಸಲಹಟ್ಟಿ | 14.00 |
| | **ಒಟ್ಟು** | **14.00** |

**ಸರ್ಕಾರಿ ಅದೇಶ ಸಂಖ್ಯೆ: ಲೋಇ 347 ಸಿಆರ್‌ಎಂ 2007, ಬೆಂಗಳೂರು, ದಿನಾಂಕ 26ನೇ ಅಕ್ಟೋಬರ್ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ದೊಡ್ಡಸಿದ್ದವ್ವನಹಳ್ಳಿಯಿಂದ ಸಿಟಿಎಂ ರಸ್ತೆ ಮಾರ್ಗ ಹಂಪಯ್ಯನಮಾಳಿಗೆ, ಬೊಮ್ಮಯ್ಯನಹಳ್ಳಿ ಸಾಸಲಹಟ್ಟಿ | 14.00 |
| | **ಒಟ್ಟು** | **14.00** |

ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 1928 ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಹನುಮೇಗೌಡ, ನೋಂದಣಾಧಿಕಾರಿ (ನಿವೃತ್ತ), ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ಮಂಡಳಿ, ಬೆಂಗಳೂರು ಇವರ ವಿರುದ್ಧ ಮಾಡಲಾದ ಭ್ರಷ್ಟಾಚಾರದ ಆಪಾದನೆಗಳ ಬಗ್ಗೆ.

**ಓದಲಾಗಿದೆ: 1)** ಸರ್ಕಾರದ ಆದೇಶ ಸಂಖ್ಯೆ: ಆಕುಕ 239 ಪಿಐಎಂ 2007, ದಿನಾಂಕ 9–10–2007

**2)** ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಂಪ್ಲೈಂಟ್/ಇತರೆ/ಬಿಸಿಡಿ/651/2007, ದಿನಾಂಕ 17.10.2007

**ಪ್ರಸ್ತಾವನೆ:**

ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ಮಂಡಳಿಯಲ್ಲಿ ನಿಯಮಬಾಹಿರ ನೇಮಕಾತಿ ಮತ್ತು ನಕಲಿ ದಾಖಲೆಗಳನ್ನು ಸೃಷ್ಟಿಸಿ, ವೈದ್ಯ ವಿದ್ವಾನ್ ವೈದ್ಯರುಗಳಿಗೆ ನೋಂದಣಿ ಪತ್ರ ನೀಡಿರುವ ಬಗ್ಗೆ ಇರುವಂತಹ ಎಲ್ಲಾ ದಾಖಲೆಗಳನ್ನು ಹಾಗೂ ಸಂಬಂಧಪಟ್ಟ ಕಡತಗಳನ್ನು ದಿನಾಂಕ 20–9–2007ರಂದು ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಭೇಟಿಯಾದ ಸಮಯದಲ್ಲಿ, ನಡೆಸಿದ ತನಿಖೆಯಲ್ಲಿ ಆಯುರ್ವೇದ ಮತ್ತು ಯುನಾನಿ ವೈದ್ಯ ಮಂಡಳಿಯಲ್ಲಿ ಈಗಾಗಲೇ ತನಿಖಾ ವರದಿಯಲ್ಲಿ ತಿಳಿಸಿದಂತೆ ನಕಲಿ ನೋಂದಣಿ ಪತ್ರ ನೀಡಿರುವಂತಹ 100 ರಿಂದ 150ಕ್ಕೂ ಮೀರಿದ ಪ್ರಕರಣಗಳು ಸಚಿವರ ಗಮನಕ್ಕೆ ಬಂದಿದ್ದು, ಆಪಾದನೆಗಳು ಮೇಲ್ನೋಟಕ್ಕೆ ಸಾಬೀತಾಗಿವೆಯೆಂದು ತೀರ್ಮಾನಿಸಿ, ಈ ಬಗ್ಗೆ ಸದರಿ ಮಂಡಳಿಯಲ್ಲಿ ನಡೆದಿರುವಂತಹ ನಿಯಮಬಾಹಿರ ನೇಮಕಾತಿ, ನಕಲಿ ವೈದ್ಯರ ನೋಂದಣಿ ಪತ್ರ ನೀಡಿಕೆ, ಇತರೆ ಹಣಕಾಸು ಅವ್ಯವಹಾರಗಳನ್ನು ಮಾಡಿರುವ ಬಗ್ಗೆ, ಡಾ: ಹನುಮೇಗೌಡ, ನೋಂದಣಾಧಿಕಾರಿ (ನಿವೃತ್ತ) ಇವರ ವಿರುದ್ಧ ಮುಂದಿನ ಸಮಗ್ರ ತನಿಖೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14(ಎ) ರಡಿಯಲ್ಲಿ ವಿಚಾರಣೆಯನ್ನು ನಡೆಸಲು ಮೇಲೆ ಓದಲಾದ (1)ರ ಆದೇಶದಲ್ಲಿ ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಲಾಗಿತ್ತು. ಮೇಲೆ ಓದಲಾದ (ii)ರ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಇವರು ಇಲಾಖಾ ವಿಚಾರಣೆಯನ್ನು ನಡೆಸಬೇಕಾದರೆ, ಲೋಕಾಯುಕ್ತ ಕಾಯ್ದೆಯ ಕಲಂ 7ರಡಿ ತನಿಖೆಯನ್ನು ಕೈಗೊಂಡು ಅದೇ ಕಾಯ್ದೆಯ ಕಲಂ 12(3)ರಡಿ ವರದಿಯನ್ನು ಕಳುಹಿಸಿದ್ದರೆ ಮಾತ್ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957ರ ನಿಯಮ 14(ಎ) ರನ್ವಯ ಇಲಾಖಾ ವಿಚಾರಣೆಯನ್ನು ವಹಿಸಬಹುದಾಗಿರುತ್ತದೆ, ಆದರೆ ಸದರಿ ವಿಷಯದಲ್ಲಿ ತನಿಖೆಯನ್ನು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 7(2ಎ)ರಡಿ ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿದೆ ಎಂಬ ಪದವನ್ನು ನಿರ್ದಿಷ್ಟವಾಗಿ ನಮೂದಿಸಿ ಸರ್ಕಾರಿ ಆದೇಶವನ್ನು ಹೊರಡಿಸಬೇಕೆಂದು ಕೋರಿದ್ದಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಪುನರ್ ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 239 ಪಿಐಎಂ 2007, ಬೆಂಗಳೂರು, ದಿನಾಂಕ 22ನೇ ನವೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಹಾಗೂ 9–10–2007ರ ಆದೇಶವನ್ನು ಮಾರ್ಪಡಿಸಿ, ಡಾ: ಹನುಮೇಗೌಡ, ನೋಂದಣಾಧಿಕಾರಿ, (ನಿವೃತ್ತ) ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ಮಂಡಳಿ, ಬೆಂಗಳೂರು ಇವರ ವಿರುದ್ಧ ಮೇಲೆ ಹೇಳಲಾದ ಆರೋಪಗಳ ಬಗ್ಗೆ, ತನಿಖೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 7(2ಎ)ರಡಿಯಲ್ಲಿ ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 2076

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ).

**ವಿಷಯ:** ಔಷಧ ನಿಯಂತ್ರಣ ಇಲಾಖೆಯಲ್ಲಿ ಮೇಲ್ದರ್ಜೆಗೇರಿಸಿರುವ ವೃತ್ತ ಕಛೇರಿಗಳಿಗೆ ದೂರವಾಣಿ ಸಂಪರ್ಕವನ್ನು ಒದಗಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ: 1)** ಸರ್ಕಾರದ ಆದೇಶ ಸಂಖ್ಯೆ: ಆಕುಕ 62 ಐಎಂಎಂ 2002 (ಭಾ), ದಿನಾಂಕ 23–7–2003

**2)** ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂ. ಔನಿಇ/90/ಯೋಜನೆ/2006–07, ದಿನಾಂಕ 14–8–2006.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಆದೇಶದಲ್ಲಿ ಔಷಧ ನಿಯಂತ್ರಣ ಇಲಾಖೆಯಲ್ಲಿ ಔಷಧ ಪರಿವೀಕ್ಷಕರ ಕಛೇರಿಗಳನ್ನು ಸಹಾಯಕ ಔಷಧ ನಿಯಂತ್ರಕರ ವೃತ್ತ ಕಛೇರಿಗಳನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರ ಮಂಜೂರಾತಿ ನೀಡಿದೆ.

ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಆದೇಶದಲ್ಲಿ ಔಷಧ ನಿಯಂತ್ರಣ ಇಲಾಖೆಯಲ್ಲಿ ದಿನಾಂಕ 14–8–2006ರ ಪತ್ರದಲ್ಲಿ ಇಲಾಖೆಯಲ್ಲಿ ಮೇಲ್ದರ್ಜೆಗೇರಿಸಿರುವ ವೃತ್ತ ಕಛೇರಿಗಳಿಗೆ ದೂರವಾಣಿ ಸಂಪರ್ಕವನ್ನು ಒದಗಿಸುವ ಸಂಬಂಧ ಈ ಕೆಳಕಂಡ ಕಛೇರಿಗಳಲ್ಲಿ ಕಾರ್ಯನಿರ್ವಹಿಸುವ ಅಧಿಕಾರಿಗಳು ಕೇಂದ್ರ ಕಛೇರಿಯನ್ನು : ಇತರೆ ಕಛೇರಿಗಳನ್ನು ಸಂಪರ್ಕಿಸಲು ಮತ್ತು ಈ ಕಛೇರಿಯ ಅಧೀನ ಕಛೇರಿಗಳನ್ನು ಸಂಪರ್ಕಿಸಲು ಹಾಗೂ ತುರ್ತು ಮಾಹಿತಿಯನ್ನು ವಿಳಂಬವಿಲ್ಲದೆ ಒದಗಿಸಲು ದೂರವಾಣಿ ಸೌಲಭ್ಯವಿಲ್ಲದಿರುವುದರಿಂದ ಈ ಕೆಳಗೆ ಕಾಣಿಸಿರುವ ವೃತ್ತ ಕಛೇರಿಗಳಿಗೆ ದೂರವಾಣಿ ಸಂಪರ್ಕವು ಅತ್ಯಗತ್ಯವಾಗಿರುವುದರಿಂದ ದೂರವಾಣಿ ಸೌಲಭ್ಯವನ್ನು ಒದಗಿಸಿಕೊಳ್ಳಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ;

| ಕ್ರ. ಸಂ. | ಕಛೇರಿಯ ಹೆಸರು |
|---|---|
| 1. | ಸಹಾಯಕ ಔಷಧ ನಿಯಂತ್ರಕರ ಕಛೇರಿ, ಚಾಮರಾಜನಗರ ವೃತ್ತ, ಚಾಮರಾಜನಗರ |
| 2. | ಸಹಾಯಕ ಔಷಧ ನಿಯಂತ್ರಕರ ಕಛೇರಿ, ಕೊಪ್ಪಳ ವೃತ್ತ, ಕೊಪ್ಪಳ |
| 3. | ಸಹಾಯಕ ಔಷಧ ನಿಯಂತ್ರಕರ ಕಛೇರಿ, ಹಾವೇರಿ ವೃತ್ತ, ಹಾವೇರಿ |
| 4. | ಸಹಾಯಕ ಔಷಧ ನಿಯಂತ್ರಕರ ಕಛೇರಿ, ಗದಗ ವೃತ್ತ, ಗದಗ |
| 5. | ಸಹಾಯಕ ಔಷಧ ನಿಯಂತ್ರಕರ ಕಛೇರಿ, ದಾವಣಗೆರೆ ವೃತ್ತ, ದಾವಣಗೆರೆ |
| 6. | ಸಹಾಯಕ ಔಷಧ ನಿಯಂತ್ರಕರ ಕಛೇರಿ, ಉಡುಪಿ ವೃತ್ತ, ಉಡುಪಿ |
| 7. | ಸಹಾಯಕ ಔಷಧ ನಿಯಂತ್ರಕರ ಕಛೇರಿ, ಬಾಗಲಕೋಟೆ ವೃತ್ತ, ಬಾಗಲಕೋಟೆ. |

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 108 ಐಎಂಎಂ 2006, ಬೆಂಗಳೂರು, ದಿನಾಂಕ 19ನೇ ನವೆಂಬರ್, 2007**

ಔಷಧ ನಿಯಂತ್ರಣ ಇಲಾಖೆಯಲ್ಲಿ ಹೊಸದಾಗಿ ಪ್ರಾರಂಭಿಸಲಾದ ಚಾಮರಾಜನಗರ, ಕೊಪ್ಪಳ, ಹಾವೇರಿ, ಗದಗ, ದಾವಣಗೆರೆ, ಉಡುಪಿ ಮತ್ತು ಬಾಗಲಕೋಟೆ ಜಿಲ್ಲೆಯ ವೃತ್ತ ಕಛೇರಿಗಳಿಗೆ ದೂರವಾಣಿ ಸಂಪರ್ಕವನ್ನು ಒದಗಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/2176/ವೆಚ್ಚ/5/2007, ದಿನಾಂಕ 24–10–2007ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 2073

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ).

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕನ್ನಡ ಅಭಿವೃದ್ಧಿ ಪ್ರಾಧಿಕಾರದಲ್ಲಿನ ಸಿಬ್ಬಂದಿಗಳ ಪ್ರತಿನಿಯೋಜನಾ ಅವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಅಪ್ರಾ: ಕಾ: 40:2006–07, ದಿನಾಂಕ 10–7–2007 ಮತ್ತು 24–7–2007.

**ಪ್ರಸ್ತಾವನೆ:**

ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರು ಮೇಲೆ ಓದಲಾದ ಪತ್ರಗಳಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದಲ್ಲಿ ಪ್ರತಿನಿಯೋಜನೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ಎಂ. ಲೋಕಯ್ಯ, ಶಾಖಾಧಿಕಾರಿ ಹಾಗೂ ಶ್ರೀಮತಿ ಟಿ.ವಿ. ಉಷಾ ಇವರುಗಳ ಪ್ರತಿನಿಯೋಜನಾ ಅವಧಿಯು ಕ್ರಮವಾಗಿ ದಿನಾಂಕ 2–9–2007 ಹಾಗೂ 8–10–2007 ರಂದು ಮುಕ್ತಾಯಗೊಳ್ಳಲಿದ್ದು ಇದನ್ನು ಇನ್ನು ಒಂದು ವರ್ಷದ ಅವಧಿಯವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 50 ಕೆಎಲ್ 2007, ಬೆಂಗಳೂರು, ದಿನಾಂಕ 15ನೇ ನವೆಂಬರ್, 2007**

ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇಲ್ಲಿ ಪ್ರತಿನಿಯೋಜನೆ ಮೇಲೆ ಶಾಖಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎಸ್.ಎಂ. ಲೋಕಯ್ಯ ಇವರ ಪ್ರತಿನಿಯೋಜನೆಯ ಅವಧಿಯನ್ನು ದಿನಾಂಕ 3–9–2007ರಿಂದ 2–9–2008ರವರೆಗೆ ಹಾಗೂ ಶ್ರೀಮತಿ ಟಿ.ವಿ. ಉಷಾ, ಪ್ರಥಮ ದರ್ಜೆ ಸಹಾಯಕರು ಇವರ ಪ್ರತಿನಿಯೋಜನಾ ಅವಧಿಯನ್ನು ದಿನಾಂಕ 9–10–2007ರಿಂದ 8–10–2008ರವರೆಗೆ ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 2071

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸರ್ಕಾರಿ ಖೋಟಾದ ಶುಶ್ರೂಷಾ ವಿದ್ಯಾರ್ಥಿಗಳ ಶುಲ್ಕ ಪರಿಷ್ಕರಣೆಯ ಬಗ್ಗೆ.

**ಓದಲಾಗಿದೆ: 1.** ಸರ್ಕಾರಿ ಆದೇಶ ಸಂಖ್ಯೆ: ಆಕುಕ 222 ವೈಶಿತ 95, ದಿನಾಂಕ 16–2–2000

**2.** ಪತ್ರ ಸಂಖ್ಯೆ: ನಿವೈಶಿ/ಎನ್‌ಆರ್‌ಸಿ(2)/48/2004–05, ದಿನಾಂಕ 24–5–2005

**3.** ಪತ್ರ ಸಂಖ್ಯೆ: ನಿವೈಶಿ/ಎನ್‌ಆರ್‌ಸಿ (2) 48/2004–05, ದಿನಾಂಕ 24–7–2007.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದ ಖಾಸಗಿ ನರ್ಸಿಂಗ್ ಶಾಲೆಗಳಲ್ಲಿ ಸರ್ಕಾರಿ ಸೀಟುಗಳಿಗೆ ಆಯ್ಕೆಯಾದ ವಿದ್ಯಾರ್ಥಿಗಳಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಕೆಳಕಂಡಂತೆ ಶುಲ್ಕವನ್ನು 1999–2000ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ನಿಗದಿಪಡಿಸಲಾಗಿತ್ತು.

| ಕ್ರ. ಸಂ. | ಬಾಬ್ತು | ಶುಲ್ಕ ರೂ.ಗಳಲ್ಲಿ |
|---|---|---|
| 1 | ಹಾಜರಾತಿ ಶುಲ್ಕ | 90/– |
| 2 | ಬೋಧನಾ ಶುಲ್ಕ | 800/– |
| 3 | ಗ್ರಂಥಾಲಯ ಶುಲ್ಕ | 50/– |
| 4 | ಪ್ರಯೋಗಾಲಯ ಶುಲ್ಕ | 50/– |
| 5 | ಕ್ರೀಡಾ ಶುಲ್ಕ | 10/– |
| | **ಒಟ್ಟು** | **1,000/–** |

ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಬೆಂಗಳೂರು ರವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಶುಶ್ರೂಷಾ ತರಬೇತಿಗೆ ಬರುವ ಅಭ್ಯರ್ಥಿಗಳು ರಾಜ್ಯದ ಹಳ್ಳಿಗಾಡಿನವರಾಗಿದ್ದು ಆರ್ಥಿಕವಾಗಿ ತುಂಬ ಹಿಂದುಳಿದವರಾಗಿರುತ್ತಾರೆಂದು ವರದಿ ಮಾಡುತ್ತ ಖಾಸಗಿ ನರ್ಸಿಂಗ್ ಶಾಲೆಗಳಲ್ಲಿ ಸರ್ಕಾರಿ ಕೋಟಾದ ಸೀಟುಗಳನ್ನು ಪಡೆಯುವ ಅಭ್ಯರ್ಥಿಗಳಿಗೆ ಈ ಕೆಳಗಿನಂತೆ ಶುಲ್ಕವನ್ನು ನಿಗದಿಪಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರ. ಸಂ. | ಬಾಬ್ತು | ಶುಲ್ಕ ರೂ.ಗಳಲ್ಲಿ |
|---|---|---|
| 1 | ಹಾಜರಾತಿ ಶುಲ್ಕ | 300/– |
| 2 | ಬೋಧನಾ ಶುಲ್ಕ | 3,600/– |
| 3 | ಗ್ರಂಥಾಲಯ ಶುಲ್ಕ | 250/– |
| 4 | ಪ್ರಯೋಗಾಲಯ ಶುಲ್ಕ | 250/– |
| 5 | ಕ್ರೀಡಾ ಶುಲ್ಕ | 100/– |
| | **ಒಟ್ಟು** | **4,500/–** |

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿದ ನಂತರ ರಾಜ್ಯದ ಖಾಸಗಿ ನರ್ಸಿಂಗ್ ಶಾಲೆಗಳಲ್ಲಿ ಸರ್ಕಾರಿ ಕೋಟಾದ ಸೀಟುಗಳನ್ನು ಪಡೆಯುವ ಅಭ್ಯರ್ಥಿಗಳಿಗೆ ಶುಲ್ಕವನ್ನು ಈ ಕೆಳಗಿನಂತೆ ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

| ಕ್ರ. ಸಂ. | ಬಾಬ್ತು | ಶುಲ್ಕ ರೂ.ಗಳಲ್ಲಿ |
|---|---|---|
| 1 | ಹಾಜರಾತಿ ಶುಲ್ಕ | 300/– |
| 2 | ಬೋಧನಾ ಶುಲ್ಕ | 3,600/– |
| 3 | ಗ್ರಂಥಾಲಯ ಶುಲ್ಕ | 250/– |
| 4 | ಪ್ರಯೋಗಾಲಯ ಶುಲ್ಕ | 250/– |
| 5 | ಕ್ರೀಡಾ ಶುಲ್ಕ | 100/– |
| | **ಒಟ್ಟು** | **4,500/–** |

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 267 ಎಂಎಸ್‌ಎಫ್ 2006, ಬೆಂಗಳೂರು, ದಿನಾಂಕ 13–11–2007**

ಕರ್ನಾಟಕ ರಾಜ್ಯದಲ್ಲಿರುವ ಖಾಸಗಿ ನರ್ಸಿಂಗ್ ಶಾಲೆಗಳಲ್ಲಿ ಸರ್ಕಾರಿ ಕೋಟಾದಡಿ ವ್ಯಾಸಂಗ ಮಾಡುವ ಅಭ್ಯರ್ಥಿಗಳಿಗೆ ವಾರ್ಷಿಕ ಶುಲ್ಕವನ್ನು 2008–09ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಗಿನಂತೆ ಪರಿಷ್ಕರಿಸಿ ನಿಗದಿಗೊಳಿಸಲಾಗಿದೆ.

| ಕ್ರ. ಸಂ. | ಬಾಬ್ತು | ಶುಲ್ಕ ರೂ.ಗಳಲ್ಲಿ |
|---|---|---|
| 1 | ಹಾಜರಾತಿ ಶುಲ್ಕ | 300/– |
| 2 | ಬೋಧನಾ ಶುಲ್ಕ | 3,600/– |
| 3 | ಗ್ರಂಥಾಲಯ ಶುಲ್ಕ | 250/– |
| 4 | ಪ್ರಯೋಗಾಲಯ ಶುಲ್ಕ | 250/– |
| 5 | ಕ್ರೀಡಾ ಶುಲ್ಕ | 100/– |
| | **ಒಟ್ಟು** | **4,500/–** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ:1891:ವೆಚ್ಚ:5/2007, ದಿನಾಂಕ 16–10–2007ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 2039

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ವೈದ್ಯಕೀಯ ಶಿಕ್ಷಣ).

## Forest, Ecology and Environment Secretariat

**Sub:** Diversion of 0.38 ha. of forest land for improvement of Yellapur-Kaiga Road in favour of Nuclear Power Corporation of India Limited, Project Kaiga, Karwar Division.

**Read: 1.** Letter No. A5 (2) GFL CR. 21/06-07, dated 26-9-2006 of the Principal Chief Conservator of Forests, Bangalore.

**2.** State Government letter No. FEE 182 FLL 2006, dated 5-2-2007.

**3.** Letter No. 4-KRB-294/07-BAN, dated 14-3-2007 of the Government of India Ministry of Environment and Forests, Regional Office, South Zone, Bangalore.

**4.** State Government letter No. FEE 182 FLL 2006, dated 21-7-2007.

**5.** Letter No. 4-KRB-294/07/BAN/702, dated 28-8-2007 of Government of India Ministry of Environment and Forests, Regional Office, South Zone, Bangalore.

**Preamble:**

The Principal Chief Conservator of Forests Bangalore vides his letter dated: 29-6-2006 read at (1) above has submitted the proposal under Section 2 of the Forest (Conservation) Act, 1980 for diversion of 0.38 ha. of forest land in Sy.No. 91, 93, 40 of Virji (V), Sy.No. 73, 49, 12 of Kucherger (V) and Sy.No. 46 of Hartuga (V) for improvement of Yellapur-Kaiga Road in favour of Nuclear Power Corporation of India Limited, Project Kaiga, Karwar Division in Uttara Kannada District subject to certain conditions.

Accordingly, the proposal was recommended to Government of India, Ministry of Environment and Forests, Regional Office (South Zone), Bangalore vide State Government letter dated: 5-2-2007 read at (2) above.

The Government of India, Ministry of Environment and Forests, Bangalore vide their letter dated 14-3-2007 read at (3) above has given their approval in principle (Stage-I) for diversion of 0.38 ha. of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated: 16-6-2007 furnished his compliance report and the same has been sent to Government of India vide State Government letter dated:21-7-2007 read at (4) above.

Finally, Government of India, Ministry of Environment and Forests, Regional Office (South Zone), Bangalore vide their letter dated: 28-8-2007 read at (5) above has conveyed their approval (Stage-II) under Section 2 of The Forest (Conservation) Act, 1980 for diversion of 0.38 ha. of forest land in Sy.No. 91, 93, 40 of Virji (V), Sy.No. 73, 49, 12 of Kucherger (V) and Sy.No. 46 of Hartuga (V) for improvement of Yellapur-Kaiga Road in favour Nuclear Power Corporation of India Limited, Project Kaiga, Karwar Division in Uttara Kannada District subject to certain conditions.

The proposals has been examined in detail and hence the order

**Government Order No. FEE 182 FLL 2006, Bangalore, Dated 17th November, 2007**

In the circumstances explained in the preamble above, Government is pleased to accord sanction under Section 2 of The Forest (Conservation) Act, 1980 for diversion of 0.38 ha. of forest land in Sy.No. 91, 93, 40 of Virji (V), Sy.No. 73, 49, 12 of Kucherger (V) and Sy.No. 46 of Hartuga (V) for improvement of Yellapur-Kaiga Road in favour Nuclear Power Corporation of India Limited, Project Kaiga, Karwar Division in Uttara Kannada District subject to the following conditions.

1. The Legal status of forest land shall remain unchanged.
2. Plantation of ten times the number of trees to be felled shall be carried out at the cost of user agency.
3. The funds received from the user agency towards CA and NPV under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003 under intimation to Central Government.

4. The total forest area utilized for the project shall not exceed 0.38 ha. and it shall be used only for the purpose for which it is diverted. In case the land is not used for the stipulated purpose or when it is no longer needed for the said purpose, then the area will be resumed by the Forest Department.
5. The lease is on a perpetual basis.
6. The land shall be utilized only for the purpose for which it is released.
7. If the land is not utilized for the purpose within 2 years and also if any violation is found of the stipulated conditions, the forest land shall revert back to Department after due approval from Government, by the Conservator of Forests under Section 82 (read with section 69 of Karnataka Forest Rules) of Karnataka Forest Act 1963.
8. The user agency has to pay the lease rent as fixed by the Government at the time of sanction and any subsequent orders in this regard.
9. The Karnataka Forest Act 1963 and Rules 1969 will be applicable for any violation.
10. Only minimum number of trees shall be cut out of the enumerated list based on actual requirement of the project.
11. The user agency shall pay the extraction and transportation charges of trees as estimated by the Deputy Conservator of Forests from the proposed land.
12. The lessee has to pay the Net Present Value (NPV) as per the Government Notification No. FEE 247 FGL 2002, dated 17-1-2004 at Rs. 5.80 lakhs to Rs. 9.20 lakhs per ha. depending upon the quantity and density of the land as determined by Deputy Conservator of Forests, Karwar.
13. The project Authorities should pay cost of soil erosion controlling structures to be constructed within the forest area all along the road.
14. The shoulder drains should be suitably covered with stone pitching in order to control soil erosion.
15. Fire for melting of local tar and mixing shall be lit at a safe distance from the trees/vegetation, which shall be decided by the concerned Divisional Forest Officer. For such constructions. It is better to avoid dry/hot windy seasons. For this purpose, fuel-wood shall be purchased by the implementing agency in advance from the depot of State Forest Development Corporation.
16. No crushing/breaking of stones shall be allowed inside forest areas. Readymade materials shall be used for upgradation of such roads.
17. Both sides of the upgraded roads shall be reinforced with brick/stone works and vegetative measures to check soil erosion, at the project cost in consultation with the Divisional Forest Officer.
18. Plantation Activities, if the concerned Divisional Forest Officer finds it necessary shall be taken up along the road at the project cost immediately. The plantation shall be maintained at the project cost.
19. No labour camp shall be established on the forest lands.
20. No work shall be allowed after sunset.
21. Any damage to forest area due to such up-gradation works shall be compensated by the implementing agency from the project cost. The extent of damage shall be assessed by the concerned Divisional Forest Officer.
22. Any other condition to be stipulated by Government of India / State Government / Principal Chief Conservator of Forests, Karnataka in the interest of conservation of forests.

By order and in the name of the Governor of Karnataka,

**P.R. KALAVATHI**

Under Secretary to Government,

Forest, Ecology and Environment Department.

P.R. 2040

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2007–08ನೇ ಸಾಲಿನ ಹೊಸ ಯೋಜನೆಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರಿ ಆದೇಶ ಸಂ: ಕಸಂವಾಪ್ರ 41 ಕೆಒಎಲ್ 2007, ದಿನಾಂಕ 13–9–07

**2.** ಕಾರ್ಯದರ್ಶಿ, ಕ.ಅ.ಪ್ರಾ. ಬೆಂಗಳೂರು ಅವರ ಪತ್ರ ಸಂ: ಕ.ಅ.ಪ್ರಾ/ಕಾ/ಲೆಕ್ಕ/1/07–08, ದಿನಾಂಕ 21–9–07.

**ಪ್ರಸ್ತಾವನೆ:**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2007–08ನೇ ಸಾಲಿನ ಹೊಸ ಯೋಜನೆಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 13–9–2007ರ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಯಿತು. ಹಾಗೂ ಆಯವ್ಯಯದಲ್ಲಿ ನಿಗದಿಪಡಿಸಿದ 150 ಲಕ್ಷ ರೂ.ಗಳಲ್ಲಿ 50 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಯಿತು. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ (2)ರಲ್ಲಿ ದಿನಾಂಕ 21–9–07 ಪತ್ರದಲ್ಲಿ ಪ್ರಾಧಿಕಾರವು ಪ್ರಸ್ತುತ ವರ್ಷದಲ್ಲಿ ಅನೇಕ ಕ್ರಿಯಾಯೋಜನೆಗಳನ್ನು ಹಮ್ಮಿಕೊಂಡಿದ್ದು, ಅವುಗಳನ್ನು ಮಾರ್ಚ್ 2008ರ ಒಳಗೆ ಮುಗಿಸಬೇಕಿರುವುದರಿಂದ ಉಳಿದ ಅನುದಾನವನ್ನು ಕೂಡಲೇ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 41 ಕೆಐಎಲ್ 2007, ಬೆಂಗಳೂರು, ದಿನಾಂಕ 17ನೇ ನವೆಂಬರ್, 2007**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2007–08ನೇ ಸಾಲಿನ ಯೋಜನಾ ಕಾರ್ಯಕ್ರಮಗಳಿಗೆ ನಿಗದಿಪಡಿಸಿದ 150 ಲಕ್ಷ ರೂ.ಗಳ ಪೈಕಿ ಉಳಿದ 100 ಲಕ್ಷ ರೂ.ಗಳನ್ನು (ರೂಪಾಯಿ ನೂರು ಲಕ್ಷ ಮಾತ್ರ) ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ಬಿಡುಗಡೆ ಮಾಡಲು ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
2. ಹಣ ಸದ್ವಿನಿಯೋಗವಾಗಿರುವುದಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–002–1–81–059 (ಯೋಜನೆ)ರಲ್ಲಿ ಭರಿಸತಕ್ಕದ್ದು.

ಆರ್ಥಿಕ ಇಲಾಖೆಯ ಸಹಮತಿಯನ್ನು ಅ.ಟಿ.ಸ: ಆಇ 1343 ವೆಚ್ಚ 5/2007, ದಿನಾಂಕ 20–7–2007ರಲ್ಲೂ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಸಹಮತಿಯನ್ನು ಅ.ಟಿ.ಸ: ಯೋಇ 126 ಜಶ 2007, ದಿನಾಂಕ 25–7–2007 ಪಡೆದು ಹಾಗೂ ಸರ್ಕಾರಿ ಆದೇಶ ಸಂ. ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರದ ಪ್ರತ್ಯಾಯೋಜನೆಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 2070

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ).

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಬೆಂಗಳೂರಿನ ಕೇಂದ್ರ ಪರಿಹಾರ ಸಮಿತಿಯ ಕಬ್ಜಾದಲ್ಲಿ ಖಾಲಿ ಇರುವ ಜಮೀನಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ವಿದ್ಯಾರ್ಥಿನಿಲಯಗಳ ನಿರ್ಮಾಣ, ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿರ್ಮಾಣ, ಡಾ: ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಬೆಂಗಳೂರು. ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ಇದರ ಕಛೇರಿಗೆ ಮತ್ತು ಭಿಕ್ಷುಕರುಗಳಿಗೆ ತಂಗುದಾಣ ಹಾಗೂ ಉದ್ಯೋಗಸ್ಥ ಮಹಿಳೆಯರಿಗೆ ಹಾಸ್ಟೆಲ್ ನಿರ್ಮಾಣ ಮಾಡುವ ಸಲುವಾಗಿ ಉಪಯೋಗಿಸಿಕೊಳ್ಳುವ ಬಗ್ಗೆ.

**ಪ್ರಸ್ತಾವನೆ:**

ಬೆಂಗಳೂರಿನ ಮಾಗಡಿ ರಸ್ತೆಯಲ್ಲಿ ಕೇಂದ್ರ ಪರಿಹಾರ ಸಮಿತಿಯ (ಬೆಗ್ಗರ್ಸ್ ಕಾಲೋನಿ) ಕಬ್ಜಾದಲ್ಲಿರುವ ಜಮೀನಿನ ಪೈಕಿ 128 ಎಕರೆ ಜಮೀನು ಖಾಲಿ ಇದೆ. ಇದನ್ನು ಸಮಾಜ ಕಲ್ಯಾಣ ಉದ್ದೇಶಕ್ಕಾಗಿ ಉಪಯೋಗಿಸದೇ ಇದ್ದಲ್ಲಿ ಜಮೀನು ಇತರೆ ಉದ್ದೇಶಗಳಿಗಾಗಿ ಹಸ್ತಾಂತರಿಸಲ್ಪಡುವ ಅಥವಾ ಅತಿಕ್ರಮಣಗೊಳ್ಳುವ ಬೆದರಿಕೆಯಲ್ಲಿದೆ. ಬೆಂಗಳೂರು ನಗರದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ವಿದ್ಯಾರ್ಥಿನಿಲಯಗಳ ನಿರ್ಮಾಣ, ಭಿಕ್ಷುಕರುಗಳಿಗೆ ತಂಗುದಾಣ, ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭಿವೃದ್ಧಿ ನಿಗಮಗಳ ಕಛೇರಿಗೆ ಹಾಗೂ ಉದ್ಯೋಗಸ್ಥ ಮಹಿಳೆಯರಿಗೆ ಹಾಸ್ಟೆಲ್ ಇತ್ಯಾದಿಗಳನ್ನು ನಿರ್ಮಾಣ ಮಾಡುವುದು ಅತ್ಯಗತ್ಯವಾಗಿರುತ್ತದೆ. ಆದುದರಿಂದ, ಇವುಗಳಿಗಾಗಿ ಸದರಿ ಜಮೀನನ್ನು ಉಪಯೋಗಿಸಿಕೊಳ್ಳಲು ಸಮಾಜ ಕಲ್ಯಾಣ ಇಲಾಖೆಯು ಉದ್ದೇಶಿಸಿದೆ. ಅಂತೆಯೇ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 38 ಎಸ್‌ಬಿಆರ್ 2007, ಬೆಂಗಳೂರು, ದಿನಾಂಕ 8ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಬೆಂಗಳೂರಿನ ಮಾಗಡಿ ರಸ್ತೆಯಲ್ಲಿ ಕೇಂದ್ರ ಪರಿಹಾರ ಸಮಿತಿಯ (ಬೆಗ್ಗರ್ಸ್ ಕಾಲೋನಿ) ಕಬ್ಜಾದಲ್ಲಿ ಇರುವ ಜಮೀನನ್ನು ಈ ಕೆಳಕಂಡ ಮೂಲಭೂತ ಸೌಕರ್ಯಗಳನ್ನು ನಿರ್ಮಾಣಕ್ಕಾಗಿ ಉಪಯೋಗಿಸಿಕೊಳ್ಳಲು ಸರ್ಕಾರವು ಆದೇಶಿಸಿದೆ:–

1) ಬೆಂಗಳೂರಿನ ಕೇಂದ್ರ ಪರಿಹಾರ ಸಮಿತಿಯ ಕಬ್ಜಾದಲ್ಲಿ ಖಾಲಿ ಇರುವ ಜಮೀನನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ವಿದ್ಯಾರ್ಥಿನಿಲಯಗಳ ನಿರ್ಮಾಣ, ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿರ್ಮಾಣ ಮತ್ತು ಭಿಕ್ಷುಕರುಗಳಿಗೆ ತಂಗುದಾಣ (ಹಾರ್ಮಿಟರಿ) ನಿರ್ಮಾಣ ಮತ್ತು ಡಾ:ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಬೆಂಗಳೂರು, ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ ಇದರ ಕಛೇರಿಗೆ ಹಾಗೂ ಉದ್ಯೋಗಸ್ಥ ಮಹಿಳೆಯರಿಗೆ ಹಾಸ್ಟೆಲ್ ನಿರ್ಮಾಣ ಮಾಡುವುದಕ್ಕೆ ಉಪಯೋಗಿಸುವುದು.
2) ಈ ಮೇಲ್ಕಿಳಿಸಿರುವ ಮೂಲಭೂತ ಸೌಕರ್ಯಗಳನ್ನು ನಿರ್ಮಾಣ ಮಾಡಲು ಕರ್ನಾಟಕ ಭೂ ಸೇನಾ ನಿಗಮ ನಿಯಮಿತ (ಕೆ.ಎಲ್ಎ.ಸಿ) ಅಥವಾ ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಅಭಿವೃದ್ಧಿ ನಿಗಮ (ಕೆ.ಎಸ್.ಐ.ಐ.ಡಿ.ಸಿ.) ಇವರುಗಳ ಪೈಕಿ ಯಾರನ್ನಾದರೂ ಒಬ್ಬರನ್ನು ತೊಡಗಿಸಿಕೊಳ್ಳುವುದು ಮತ್ತು ಒಂದು ವ್ಯಾಪಕ ಯೋಜನೆಯನ್ನು ಅಭಿವೃದ್ಧಿ ಪಡಿಸಲು ಹಾಗೂ ಕೆ.ಟಿ.ಪಿ.ಪಿ. ಅಧಿನಿಯಮದಡಿಯಲ್ಲಿ ನಿರ್ದಿಷ್ಟಪಡಿಸಿರುವ ವಿಧಿ–ವಿಧಾನಗಳನ್ನು ಅನುಸರಿಸುವುದು.
3) ವಿಧಿ–ವಿಧಾನಗಳ ರೀತ್ಯಾ ಈ ಯೋಜನೆಯನ್ನು ಅನುಮೋದಿಸಲು ಮತ್ತು ಅನುಷ್ಠಾನಗೊಳಿಸಲು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ನೇತೃತ್ವದಲ್ಲಿ, ಆರ್ಥಿಕ, ಕಂದಾಯ, ಸಮಾಜ ಕಲ್ಯಾಣ, ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಮತ್ತು ನಗರಾಭಿವೃದ್ಧಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರನ್ನೊಳಗೊಂಡಂತೆ ಒಂದು ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಂ. ಚಿದಾನಂದಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1840

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆಗೆ 2007–08ನೇ ಸಾಲಿಗೆ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ: 1.** ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆರವರ ಪತ್ರ ಸಂಖ್ಯೆ: ಕಸಸಂ/ಸಧ/06–07, ದಿನಾಂಕ 21–9–07

**2.** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರುರವರ ಪತ್ರ ಸಂಖ್ಯೆ: ಡಿಎಸ್‌ಕೆ/ಸ–ಧನ/ 2007–08, ದಿನಾಂಕ 3–11–07.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರಗಳಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಗೆ 2007–08ನೇ ಸಾಲಿಗೆ 50 ಲಕ್ಷ ರೂಗಳ ಅನುದಾನ ಒದಗಿಸಲಾಗಿದ್ದು, ಸಂಸ್ಥೆಯು ಈ ಕೆಳಕಂಡ ಅಭಿವೃದ್ಧಿ ಕಾಮಗಾರಿಗಳನ್ನು ಒಟ್ಟು 69,71,000.00 ರೂಗಳ ವೆಚ್ಚದಲ್ಲಿ ತೆಗೆದುಕೊಳ್ಳಲು ಉದ್ದೇಶಿಸಿದ್ದು, ಈ ಅಭಿವೃದ್ಧಿ ಕಾಮಗಾರಿಗಳಿಗೆ ಹಣದ ಅವಶ್ಯಕತೆ ಇದೆ ಎಂದು ತಿಳಿಸಿ, 2007–08ನೇ ಸಾಲಿನ ಅನುದಾನದಲ್ಲಿ ಒದಗಿಸಲಾಗಿರುವ 50 ಲಕ್ಷ ರೂಗಳನ್ನು ಮಂಜೂರು ಮಾಡಿ ಬಿಡುಗಡೆ ಮಾಡಲು ಕೋರಿರುತ್ತಾರೆ.

| | | |
|---|---|---|
| 1. | ಬೆಳಗಾವಿ ತಾಲ್ಲೂಕಿನ ಎರಗಟ್ಟಿ ಗ್ರಾಮದಲ್ಲಿ ಭೂ ಅಭಿವೃದ್ಧಿ ಮತ್ತು ಸಂಶೋಧನೆಗಾಗಿ | – 19,52,000.00 ರೂಗಳು |
| 2. | ಮಂಡ್ಯದಲ್ಲಿನ ಸಾತನೂರು ಫಾರಂನ ಉಪ ಕೇಂದ್ರದ ಅಭಿವೃದ್ಧಿಗಾಗಿ | – 11,,60,000.00 ರೂಗಳು |
| 3. | ಜಡ್‌ಷಹಾಪುರ ಫಾರಂನ ಕಾರ್ಯಗಳಿಗಾಗಿ | – 04,57,000.00 ರೂಗಳು |
| 4. | ಆಡಳಿತಾತ್ಮಕ ಮತ್ತು ಕಛೇರಿ ನಿರ್ವಹಣೆ ವೆಚ್ಚಕ್ಕಾಗಿ | – 31,22,000.00 ರೂಗಳು |
| 5. | ತರಬೇತಿ ಮತ್ತು ಕಛೇರಿ ಕೆಲಸಗಳಿಗೆ ಪೀಠೋಪಕರಣಗಳ ಖರೀದಿ | – 02,80,000.00 ರೂಗಳು |
| | | ಒಟ್ಟು 69,71,000.00 ರೂಗಳು |

ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರುರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 321 ಎಸ್‌ಜಿಎಫ್ 2007, ಬೆಂಗಳೂರು, ದಿನಾಂಕ 26ನೇ ನವೆಂಬರ್, 2007**

ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಗಳಲ್ಲಿ ವಿವರಿಸಿರುವಂತೆ ಕರ್ನಾಟಕ ಸಕ್ಕರೆ ಸಂಸ್ಥೆಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂ ಇದಕ್ಕೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಯೋಜನಾ ಕಾರ್ಯಕ್ರಮಗಳನ್ನು ಪೂರ್ಣಗೊಳಿಸಿದ ನಂತರ ವರದಿಯನ್ನು ಸಲ್ಲಿಸುವ ಷರತ್ತಿಗೆ ಒಳಪಟ್ಟು 2007–08ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2885–08–201–0–04 (059)ಅಡಿಯಲ್ಲಿ ಒದಗಿಸಲಾಗಿರುವ ರೂ.50.00 ಲಕ್ಷಗಳನ್ನು (ಐವತ್ತು ಲಕ್ಷ ರೂಗಳು ಮಾತ್ರ) ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಮೇಲು ರುಜು ಪಡೆದು ಸದರಿ ಹಣವನ್ನು ಖಜಾನೆಯಿಂದ ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ–21–ಟಿಎಫ್‌ಪಿ 2006, ದಿನಾಂಕ 2–9–2006ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪಿ.ಆರ್. 2078 ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಡಿ.ವಿ. ಶೇಟ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿ ಇವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** **1.** ಸರ್ಕಾರದ ಆದೇಶ ಸಂ: ಸಿಆಸುಇ 59 ಎಸ್‌ಇಎನ್ 2005, ದಿನಾಂಕ 3–4–2007.

**2.** ವಿಚಾರಣಾಧಿಕಾರಿಯವರ ವರದಿ ದಿನಾಂಕ 24–9–2007.

**ಪ್ರಸ್ತಾವನೆ:**

ಶ್ರೀ ಜಿ.ಎಸ್. ಜಿದ್ದಿಮನಿ, ಕೆ.ಎ.ಎಸ್. ಕಿರಿಯ ಶ್ರೇಣಿ ಅಧಿಕಾರಿ ಮತ್ತು ಶ್ರೀ ಎಂ.ಐ. ಕಂಬೋಗಿ, ಲೆಕ್ಕ ಸಹಾಯಕರು, ಘಟಪ್ರಭ, ಎಡದಂಡೆ ಕಾಲುವೆ, ವಿಭಾಗ–3, ಬೀಳಗಿ ಇವರುಗಳು ಕೃಷ್ಣಾ ಮೇಲ್ದಂಡೆ ಯೋಜನೆ, ಬೀಳಗಿಯಲ್ಲಿ ಕ್ರಮವಾಗಿ ವಿಶೇಷ ಭೂಸ್ವಾಧೀನಾಧಿಕಾರಿ ಹಾಗೂ ಪ್ರಥಮ ದರ್ಜೆ ಸಹಾಯಕರ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಜಮಖಂಡಿ ಹೆಚ್ಚುವರಿ ದಿವಾಣಿ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಲು ವಿಳಂಬವೆಸಗಿ ಪ್ರಕರಣವು ಉಚ್ಚ ನ್ಯಾಯಾಲಯದಲ್ಲಿ ವಜಾಗೊಂಡಿದ್ದರ ಪರಿಣಾಮ ಸರ್ಕಾರಕ್ಕೆ ಆರ್ಥಿಕ ಹಾನಿ ಉಂಟು ಮಾಡಿ ಕರ್ತವ್ಯ ಲೋಪ ಎಸಗಿರುವ ಆರೋಪಕ್ಕಾಗಿ ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 3–4–2007ರ ಆದೇಶದಲ್ಲಿ ಶ್ರೀ ಬಿ.ವಿ. ಶೇಟ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 24–9–2007ರಂದು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಬೇಕಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 310 ಕೆಇವಿ 2007 (ಭಾ) (ಸಿಆಸುಇ 59 ಎಸ್‌ಇಎನ್ 2005),**
**ಬೆಂಗಳೂರು, ದಿನಾಂಕ 25ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಡಿ.ವಿ. ಶೇಟ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಧಾರವಾಡ ಇವರಿಗೆ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದಕ್ಕಾಗಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005, ದಿನಾಂಕ 23–8–2005ರನ್ವಯ ರೂ. 6,000.00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ 4–3–2002ರನ್ವಯ ರೂ. 1000.00 (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ವಾಹನ ಭತ್ಯೆಯನ್ನು ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ '2052 ಸಚಿವಾಲಯ ಸಾಮಾನ್ಯ ಸೇವೆಗಳು–090–ಸಚಿವಾಲಯ–01, ಕರ್ನಾಟಕ ಸರ್ಕಾರ ಸಚಿವಾಲಯ–051 ಸಾಮಾನ್ಯ ವೆಚ್ಚಗಳು' ರಲ್ಲಿ ಭರಿಸತಕ್ಕದ್ದು.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1938 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2).

**ವಿಷಯ:** ಶ್ರೀಮತಿ ಎನ್. ದೇವಕುಮಾರಿ, ಕೆಎಎಸ್ ಹಾಗೂ ಶ್ರೀ ಪಿ. ಶಿವಣ್ಣ ಕಿರಿಯ ಅಭಿಯಂತರರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿ ಕಾರಿಯವರನ್ನು ನೇಮಕ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:** **1.** ನೋಟೀಸ್ ಸಂಖ್ಯೆ: ಸಿಆಸುಇ 270 ಎಸ್‌ಇಎನ್ 2006, ದಿನಾಂಕ 18–12–06

**2.** ಶ್ರೀಮತಿ ಎನ್. ದೇವಕುಮಾರಿ ರವರ ಮನವಿಗಳು ದಿನಾಂಕ 19–1–07, 15–6–07, 29–6–07 ಮತ್ತು 21–7–2007.

**3.** ಶ್ರೀ ಪಿ. ಶಿವಣ್ಣರವರ ಮನವಿ ದಿನಾಂಕ 27–1–2007

**4.** ಹಿಂಬರಹ ಸಂಖ್ಯೆ: ಸಿಆಸುಇ 270 ಎಸ್‌ಇಎನ್ 2006, ದಿನಾಂಕ 1–6–07, 13–7–07 ಮತ್ತು 6/11–9–2007.

**ಪ್ರಸ್ತಾವನೆ:**

ಶ್ರೀಮತಿ ಎನ್. ದೇವಕುಮಾರಿ, ಕೆಎಎಸ್ ಇವರು ಬೆಂಗಳೂರಿನ ಮಹಾತ್ಮಗಾಂಧಿ ಗ್ರಾಮೀಣ ಇಂಧನ ಮತ್ತು ಅಭಿವೃದ್ಧಿ ಸಂಸ್ಥೆಯಲ್ಲಿ ನಿರ್ದೇಶಕರಾಗಿ : ವಿಶೇಷ ಕರ್ತವ್ಯಾಧಿಕಾರಿಯಾಗಿ ಮತ್ತು ಶ್ರೀ ಪಿ. ಶಿವಣ್ಣ ಇವರು ಸದರಿ ಸಂಸ್ಥೆಯಲ್ಲಿ ಕಿರಿಯ ಅಭಿಯಂತರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ವಿಂಡ್ ಜನರೇಟರ್ ಖರೀದಿಯಲ್ಲಿ ಅವ್ಯವಹಾರ ನಡೆಸಿದ್ದರೆನ್ನಲಾದ ಆಪಾದನೆ ಕುರಿತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11–ಎ ರನ್ವಯ ಸದರಿಯವರಿಗೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದಂತೆ ನೋಟೀಸ್ ಜಾರಿ ಮಾಡಿ ಸಮಜಾಯಿಸಿ ಕೇಳುವ ಮೂಲಕ ಇವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಸದರಿ ಅಧಿಕಾರಿಗಳು ಮೇಲೆ ಕ್ರಮ ಸಂಖ್ಯೆ (2) ಮತ್ತು (3)ರಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳ ಪ್ರತಿಗಳನ್ನು ಅವಗಾಹಿಸಿ ಲಿಖಿತ ಹೇಳಿಕೆಯನ್ನು ಸಲ್ಲಿಸಲು ತಮಗೆ ಕಾಲಾವಕಾಶ ನೀಡುವಂತೆ ಕೋರಿರುತ್ತಾರೆ. ಅದರಂತೆ ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಹಿಂಬರಹದ ಮುಖಾಂತರ ಅಧಿಕಾರಿ : ನೌಕರರಿಗೆ ಅವರು ಕೋರಿರುವ ದಾಖಲೆಗಳನ್ನು ನೊಂದಾಯಿತ ಪತ್ರದ ಮುಖಾಂತರ ಕಳುಹಿಸಿ ಲಿಖಿತ ಉತ್ತರಗಳನ್ನು ಕೂಡಲೇ ಸಲ್ಲಿಸುವಂತೆ ಕೋರಲಾಗಿತ್ತು. ಆದರೆ ನಿಗದಿತ ಅವಧಿಯು ಮುಕ್ತಾಯಗೊಂಡಿದ್ದರೂ ಆಪಾದಿತರಿಂದ ಯಾವುದೇ ಲಿಖಿತ ಹೇಳಿಕೆ ಸ್ವೀಕೃತವಾಗದ ಕಾರಣ ಸದರಿ ಅಧಿಕಾರಿ : ನೌಕರರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನು ಹಾಗೂ ಮಂಡನಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 129 ಕೆಇವಿ 2007 (ಸಿಆಸುಇ 270 ಎಸ್ಇಎನ್ 2006),**
**ಬೆಂಗಳೂರು, ದಿನಾಂಕ 24ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರನ್ವಯ ನಿಯಮ 13ನ್ನು ಓದಿಕೊಂಡಂತೆ ಸರ್ಕಾರವು ಶ್ರೀಮತಿ ಎನ್. ದೇವಕುಮಾರಿ, ಕೆಎಎಸ್, ಹಿಂದಿನ ನಿರ್ದೇಶಕರು, ಮಹಾತ್ಮಗಾಂಧಿ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಹಾಲಿ ನಿರ್ದೇಶಕರು (ಯೋಜನೆ ಮತ್ತು ಅನುಷ್ಠಾನ) ಜಲಸಂವರ್ಧನೆ ಯೋಜನೆ ಸಂಘ, ಬೆಂಗಳೂರು ಹಾಗೂ ಶ್ರೀ ಪಿ. ಶಿವಣ್ಣ, ಕಿರಿಯ ಅಭಿಯಂತರರು ಐ.ಆರ್.ಇ.ಪಿ. ಚೋಳನಾಯಕನಹಳ್ಳಿ ಗ್ರಾಮ ಪಂಚಾಯತ್, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ಮೇಲೆ ಹೊರಿಸಲಾದ ಆರೋಪ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಶ್ರೀ ವಿ.ಎನ್. ಕುಲಕರ್ಣಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರುರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತಿದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005, ದಿನಾಂಕ 23–8–2005ರನ್ವಯ ರೂ. 6000.00 (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ 4–3–2002ರಂತೆ ರೂ. 1000–00 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆ ಪಡೆಯಲಿದ್ದಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಧೀನ ಕಾರ್ಯದರ್ಶಿ (ಜಿಲ್ಲಾ ಪಂಚಾಯತ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಬೆಂಗಳೂರುರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಕ್ರಮ ಕೈಗೊಳ್ಳುತ್ತದೆ. ವಿಚಾರಣೆಯನ್ನು 3 ತಿಂಗಳೊಳಗೆ ಮುಗಿಸಿ ವರದಿ ಸಲ್ಲಿಸುವಂತೆ ಆದೇಶಿಸಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1939

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2).

**ವಿಷಯ:** ಶ್ರೀ ಕೆ.ಎಸ್. ನಿಂಗಪ್ಪ, ಕೆಎಎಸ್ (ನಿ)ರವರ ವಿರುದ್ಧ ಇಲಾಖಾ ವಿಚಾರಣೆ–ಬದಲಿ ವಿಚಾರಣಾಧಿಕಾರಿಯನ್ನು ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರಿ ಆದೇಶ ಸಂ: ಸಿಆಸುಇ 397 ಎಸ್ಇಎನ್ 2006, ದಿನಾಂಕ 25–8–2007.

**2.** ನಿರ್ದೇಶಕರು, (ಕಾರ್ಯಕ್ರಮಗಳು) ಸರ್ವಶಿಕ್ಷಣ ಅಭಿಯಾನರವರ ಪತ್ರ ಸಂಖ್ಯೆ: ಸಶಿಅ/ಆ.ಶಾ. (ನಿ)ಕೆಎಎಸ್ ಅಧಿಕಾರಿ/ವಿಚಾರಣೆ ದಿನಾಂಕ 1–9–2007.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಕೆ.ಎಸ್. ನಿಂಗಪ್ಪ, ಕೆಎಎಸ್ (ನಿ) ಹಾಗೂ ಇತರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ, ಉಪ ನಿರ್ದೇಶಕರು ತುಮಕೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಆದರೆ, ಸರ್ವ ಶಿಕ್ಷಣ ಅಭಿಯಾನ ರಾಜ್ಯ ಯೋಜನಾ ಕಛೇರಿಯಲ್ಲಿ ರಾಜ್ಯ ಯೋಜನಾ ನಿರ್ದೇಶಕರು, ಭಾ.ಆ.ಸೇ. ಮತ್ತು ನಿರ್ದೇಶಕರು (ಕಾರ್ಯಕ್ರಮಗಳು) ಎಂದು ಎರಡು ಹುದ್ದೆಗಳಿದ್ದು, ಸರ್ಕಾರದ ಆದೇಶದಂತೆ ವಿಚಾರಣೆ ಎದುರಿಸುವ ಅಧಿಕಾರಿಯು ಕೆಎಎಸ್ ವೃಂದದ ಅಧಿಕಾರಿಯಾಗಿರುವ ಕಾರಣ ಯಾವ ಹುದ್ದೆಯ ಅಧಿಕಾರಿಯನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದೆ ಎಂಬ ಬಗ್ಗೆ ಸ್ಪಷ್ಟಪಡಿಸಲು ಉಲ್ಲೇಖ (2)ರಲ್ಲಿ ನಿರ್ದೇಶಕರು (ಕಾರ್ಯಕ್ರಮಗಳು) ಸರ್ವಶಿಕ್ಷಣ ಅಭಿಯಾನರವರು ಕೋರಿದ್ದಾರೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 397 ಎಸ್ಇಎನ್ 2006, ಬೆಂಗಳೂರು, ದಿನಾಂಕ 27ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ರೊಂದಿಗೆ ಓದಿಕೊಂಡಂತೆ ನಿಯಮ 11 (5)ಸಿ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಎಸ್. ನಿಂಗಪ್ಪ, ಕೆಎಎಸ್ (ನಿ)ರವರ ವಿರುದ್ಧದ ಇಲಾಖಾ ವಿಚಾರಣೆ ನಡೆಸಲು ದಿನಾಂಕ 25–8–2007ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾದ ನಿರ್ದೇಶಕರು, ಸರ್ವಶಿಕ್ಷಣ ಅಭಿಯಾನ, ಬೆಂಗಳೂರುರವರ ಬದಲಿಗೆ ರಾಜ್ಯ ಯೋಜನಾ ನಿರ್ದೇಶಕರು, (ಭಾ.ಆ.ಸೇ) ಸರ್ವಶಿಕ್ಷಣ ಅಭಿಯಾನ ಬೆಂಗಳೂರುರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ.

ಈ ಪ್ರಕರಣದಲ್ಲಿ, ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯು ಮುಂದೆ ಮಂಡಿಸಲು ಉಪ ನಿರ್ದೇಶಕರು ತುಮಕೂರುರವರನ್ನು ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1940 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್, ಪ್ರಿನ್ಸಿಪಾಲ್, ಎ.ಪಿ.ಟಿ.ಎಸ್. ಯಲಹಂಕ, ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ: 1.** ಪೋಲೀಸ್ ಮಹಾ ನಿರ್ದೇಶಕರ ಕಛೇರಿ, ಸಿ.ಓ.ಡಿ. ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಬೆಂಗಳೂರುರವರ ಪತ್ರ ಸಂಖ್ಯೆ:ಪಿಟಿಷನ್.6/ಡಿಜಿಪಿ/ಸಿಓಡಿ/2007, ದಿನಾಂಕ 05-09-2007.

**ಸರ್ಕಾರದ ಆದೇಶ ಸಂಖ್ಯೆ : ಒಇ 175 ಪೊಸಿಪ 2006, ಬೆಂಗಳೂರು, ದಿನಾಂಕ 18ನೇ ಅಕ್ಟೋಬರ್, 2007.**

ಪೊಲೀಸ್ ಮಹಾ ನಿರ್ದೇಶಕರು, ಸಿ.ಓ.ಡಿ. ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಬೆಂಗಳೂರು ಇವರು ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್, ಪ್ರಿನ್ಸಿಪಾಲ್, ಎ.ಪಿ.ಟಿ.ಎಸ್, ಯಲಹಂಕ, ಬೆಂಗಳೂರು ಇವರ ವಿರುದ್ಧ ಮಾಡಲಾದ ಕರ್ತವ್ಯಲೋಪ, ದುರ್ನಡತೆ, ಅಧಿಕಾರದ ದುರುಪಯೋಗ ಈ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ಮೇಲೆ (1) ರಲ್ಲಿ ಓದಲಾದ ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡು ಬಂದಿರುವುದರಿಂದ ಈ ಪ್ರಾಥಮಿಕ ವರದಿಯ ಆಧಾರದ ಮೇಲೆ ಇವರು ಸುಗಮ ತನಿಖೆಗೆ ಅಡ್ಡಿಪಡಿಸಬಹುದಾದ ಹಾಗೂ ದಾಖಲೆ/ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯಕವೆಂದು ಸರ್ಕಾರವು ಭಾವಿಸಿರುವುದರಿಂದ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್ ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್, ಪ್ರಿನ್ಸಿಪಾಲ್ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್, ಪ್ರಿನ್ಸಿಪಾಲ್ ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1905 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಕರ್ನಾಟಕ ನಾಗರೀಕ ಸೇವಾ ನಿಯಮ 285(4) ರಡಿಯಲ್ಲಿ ಶ್ರೀ.ಎನ್.ಎಸ್.ಶಿರೋಳ, ಪೊಲೀಸ್ ಇನ್ಸ್‌ಪೆಕ್ಟರ್ (ಸಿವಿಲ್) ಇವರನ್ನು ನಿವೃತ್ತಿಗೊಳಿಸುವ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ6/48/2007–08, ದಿನಾಂಕ 30–05–2006 ಮತ್ತು 29–09–2007.

**ಸರ್ಕಾರದ ಆದೇಶ ಸಂಖ್ಯೆ : ಒಇ 263 ಪೊಸಿಪ 2007, ಬೆಂಗಳೂರು, ದಿನಾಂಕ 06ನೇ ನವೆಂಬರ್, 2007.**

ಶ್ರೀ.ಎನ್.ಎಸ್.ಶಿರೋಳ, ಪೊಲೀಸ್ ಇನ್ಸ್‌ಪೆಕ್ಟರ್ (ಸಿವಿಲ್), ಡಿ.ಸಿ.ಆರ್.ಬಿ., ಗದಗ ರವರು 50 ವರ್ಷಗಳ ವಯೋಮಿತಿ ದಾಟಿರುವುದರಿಂದಲೂ ಹಾಗೂ 20 ವರ್ಷಗಳ ಅರ್ಹದಾಯಕ ಸೇವೆಯನ್ನು ಸಲ್ಲಿಸಿರುವುದರಿಂದಲೂ,

ಮತ್ತು ಕರ್ನಾಟಕ ಸರ್ಕಾರವು ಸಾರ್ವಜನಿಕ ಹಿತದೃಷ್ಟಿಯಿಂದ ಶ್ರೀ.ಎನ್.ಎಸ್.ಶಿರೋಳ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285ರ ಉಪ ನಿಯಮ 4 ರನ್ವಯ ಸೇವೆಯಿಂದ ನಿವೃತ್ತಿಗೊಳಿಸುವುದು ಅಗತ್ಯವೆಂದು ಪರಿಗಣಿಸಿರುವುದರಿಂದಲೂ,

ಕರ್ನಾಟಕ ಸರ್ಕಾರವು ಶ್ರೀ.ಎನ್.ಎಸ್.ಶಿರೋಳ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 285ರ ಉಪ ನಿಯಮ 4 ರಡಿಯಲ್ಲಿ ಈ ಮೂಲಕ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ನಿವೃತ್ತಿಗೊಳಿಸಿ ಆದೇಶಿಸಿದೆ.

ಸದರಿ ನಿಯಮಗಳ ಅನ್ವಯ ನೀಡಬೇಕಾದ 3 ತಿಂಗಳ ಸೂಚನೆಯ ಬದಲಾಗಿ ಶ್ರೀ.ಎನ್.ಎಸ್.ಶಿರೋಳ, ಪೊಲೀಸ್ ಇನ್ಸ್‌ಪೆಕ್ಟರ್ ರವರಿಗೆ ಪ್ರತಿ ತಿಂಗಳು, ನಿವೃತ್ತಿ ಹೊಂದಿದ ದಿನಾಂಕದಿಂದ 3 ತಿಂಗಳ ಅವಧಿಗೆ, ನಿವೃತ್ತಿಯ ದಿನಾಂಕದ ನಿಕಟಪೂರ್ವದಲ್ಲಿ ಪಡೆಯುತ್ತಿದ್ದ ವೇತನಕ್ಕೆ ಸಮನಾದ ಮೊತ್ತವನ್ನು ಪಡೆಯಲು ಈ ಮೂಲಕ ಅನುಮತಿ ನೀಡಲಾಗಿದೆ. ಸದರಿ ಅವಧಿಯಲ್ಲಿ ಇವರಿಗೆ ದೊರಕುವ ವೇತನ ಬಡ್ತಿ (Increment) ಇದ್ದಲ್ಲಿ ಇದನ್ನು ಅವರಿಗೆ ನೀಡುವುದು ಹಾಗೂ ಸದರಿ ವೇತನವನ್ನು ಪಡೆಯುವ ಈ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸುವುದು. 3 ತಿಂಗಳ ಸೂಚನಾ ಪತ್ರದ ಬದಲಾಗಿ ನೀಡುತ್ತಿರುವ 3 ತಿಂಗಳ ವೇತನವನ್ನು ಸರ್ಕಾರದ ಆದೇಶ ಸಂಖ್ಯೆ:DPAR 12 SDE 85, ದಿನಾಂಕ 24–06–1985 ರಲ್ಲಿನ ಸೂಚನೆಯನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 2008

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ.ಸೂರ್ಯನಾರಾಯಣ ರಾವ್, ಹಿಂದೆ ಪಿ.ಎಸ್.ಐ. ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಗಳನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:** **1.** ಸರ್ಕಾರದ ಆದೇಶ ಸಂಖ್ಯೆ:ಒಇ 253 ಪೊಸಿಪ 2003, ದಿನಾಂಕ 26–11–2004 ಮತ್ತು 01–07–2006.

**2.** ಡಿಜಿ ಮತ್ತು ಐಜಿಪಿ ರವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಸಿಬಿ(5)/21/2003–04, ದಿನಾಂಕ 02–11–2007

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಕೆ.ಎಸ್.ಪಿ. (ಡಿಪಿ) ನಿಯಮಗಳು, 1965ರ ನಿಯಮ 6ರ ಉಪ ನಿಯಮ 9(ಎ) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ಸೂರ್ಯನಾರಾಯಣ ರಾವ್, ಪಿ.ಎಸ್.ಐ. ಹಾಗೂ ಶ್ರೀ.ಯು.ಎಂ.ಮುದ್ದಯ್ಯ, ಡಿವೈ.ಎಸ್.ಪಿ. ಹಾಲಿ ಎಸ್.ಪಿ. ರವರುಗಳ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿ ಶ್ರೀ.ಎಸ್.ಟಿ.ರಮೇಶ್, ಎ.ಡಿ.ಜಿ.ಪಿ. (ಪಿಸಿಡಬ್ಲ್ಯೂ) ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ವಿಚಾರಣಾಧಿಕಾರಿಯವರು ಶ್ರೀ.ಯು.ಎಂ.ಮುದ್ದಯ್ಯ, ನಿವೃತ್ತ ಡಿವೈ.ಎಸ್.ಪಿ. ರವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಿ ದೋಷಮುಕ್ತಗೊಳಿಸಿ ಸರ್ಕಾರಕ್ಕೆ ವರದಿ ಸಲ್ಲಿಸಿದ್ದ ಹಿನ್ನೆಲೆಯಲ್ಲಿ ದಿನಾಂಕ 01–07–2006ರ ಆದೇಶದಲ್ಲಿ ಇವರ ವಿರುದ್ಧದ ವಿಚಾರಣೆಯನ್ನು ಕೈಬಿಡಲಾಗಿದೆ. ಇನ್ನುಳಿದ ಆರೋಪಿತರಾದ ಶ್ರೀ.ಸೂರ್ಯನಾರಾಯಣ ರಾವ್, ಪಿ.ಎಸ್.ಐ. ಮತ್ತು ಇತರರ ವಿರುದ್ಧ ಇಲಾಖಾ ವಿಚಾರಣೆ ಮುಂದುವರೆಸಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಶ್ರೀ.ಎಸ್.ಟಿ.ರಮೇಶ್, ಎ.ಡಿ.ಜಿ.ಪಿ. ರವರ ಬದಲಿಗೆ ಶ್ರೀ.ಕೆ.ಶ್ರೀಕಂತ, ಎಸ್.ಪಿ., ಸಿ.ಓ.ಡಿ. ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 253 ಪೊಸಿಪ 2003, ಬೆಂಗಳೂರು, ದಿನಾಂಕ 16ನೇ ನವೆಂಬರ್, 2007.**

ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ.ಸೂರ್ಯನಾರಾಯಣ ರಾವ್, ಪಿ.ಎಸ್.ಐ. ಮತ್ತಿತರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ.ಎಸ್.ಟಿ.ರಮೇಶ್, ಎ.ಡಿ.ಜಿ.ಪಿ. (ಪಿಸಿಡಬ್ಲ್ಯೂ)ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ

ದಿನಾಂಕ 26–11–2004ರ ಆದೇಶವನ್ನು ಭಾಗಶ: ಮಾರ್ಪಡಿಸಿ ಶ್ರೀ.ಕೆ.ಶ್ರೀಕಂಠ, ಎಸ್.ಪಿ. ಸಿ.ಓ.ಡಿ. ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 19 ಸೇಇವಿ 2001, ದಿನಾಂಕ 28–06–2001 ರಲ್ಲಿ ಹೊರಡಿಸಿರುವ ಸೂಚನೆಗಳಂತೆ ವಿಚಾರಣೆಯನ್ನು 3 ತಿಂಗಳೊಳಗಾಗಿ ಪೂರ್ಣಗೊಳಿಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 2058 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ.ಎಂ.ಎಸ್.ಪಟೇಲ್, ನಿವೃತ್ತ ಎಸ್.ಪಿ. ಮತ್ತು ಶ್ರೀ.ರಮೇಶ್ ಕುಮಾರ್, ಪಿ.ಐ. ರವರುಗಳ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಗಳನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ: 1.** ಸರ್ಕಾರದ ಆದೇಶ ಸಂಖ್ಯೆ:ಒಇ 267 ಪೊಸಿಪ 2003, ದಿನಾಂಕ 27–05–2005.

**2.** ಡಿಜಿ ಮತ್ತು ಐಜಿಪಿ ರವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಸಿಬಿ(5)/18/2003–04, ದಿನಾಂಕ 02–11–2007

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಕೆ.ಎಸ್.ಪಿ. (ಡಿಪಿ) ನಿಯಮಗಳು, 1965ರ ನಿಯಮ 6ರ ಉಪ ನಿಯಮ 9(ಎ) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ಎಂ.ಎಸ್.ಪಟೇಲ್, ನಿವೃತ್ತ ಎಸ್.ಪಿ. ಮತ್ತು ಶ್ರೀ.ರಮೇಶ್ ಕುಮಾರ್, ಪಿ.ಐ. ರವರುಗಳ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿ ಡಿಐ.ಜಿ.ಪಿ. ಡಿ.ಸಿ.ಆರ್.ಇ. ಬೆಂಗಳೂರು ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಶ್ರೀ.ಜಯಪ್ರಕಾಶ್ ವಿ.ನಾಯಕ್, ಐಪಿಎಸ್, ಡಿಐ.ಜಿ.ಪಿ. ಡಿ.ಸಿ.ಆರ್.ಇ. ಬೆಂಗಳೂರು ರವರ ಬದಲಿಗೆ ಡಾ.ಬಿ.ಇ.ಉಮಾಪತಿ, ಐಪಿಎಸ್, ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಡಿ.ಸಿ.ಆರ್.ಇ. ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 267 ಪೊಸಿಪ 2003, ಬೆಂಗಳೂರು, ದಿನಾಂಕ 16ನೇ ನವೆಂಬರ್, 2007.**

ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ.ಎಂ.ಎಸ್.ಪಟೇಲ್, ನಿವೃತ್ತ ಎಸ್.ಪಿ. ಮತ್ತು ಶ್ರೀ.ರಮೇಶ್ ಕುಮಾರ್, ಪಿ.ಐ. ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಡಿಐ.ಜಿ.ಪಿ. ಡಿ.ಸಿ.ಆರ್.ಇ. ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ ದಿನಾಂಕ 27–05–2005ರ ಆದೇಶವನ್ನು ಭಾಗಶ: ಮಾರ್ಪಡಿಸಿ ಡಾ.ಬಿ.ಇ.ಉಮಾಪತಿ, ಐಪಿಎಸ್, ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಡಿ.ಸಿ.ಆರ್.ಇ. ಬೆಂಗಳೂರು ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 19 ಸೇಇವಿ 2001, ದಿನಾಂಕ 28–06–2001 ರಲ್ಲಿ ಹೊರಡಿಸಿರುವ ಸೂಚನೆಗಳಂತೆ ವಿಚಾರಣೆಯನ್ನು 3 ತಿಂಗಳೊಳಗಾಗಿ ಪೂರ್ಣಗೊಳಿಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 2056 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್, ಪ್ರಿನ್ಸಿಪಾಲ್, ಎ.ಪಿ.ಟಿ.ಎಸ್. ಯಲಹಂಕ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ ಆದೇಶಿಸುವ ಬಗ್ಗೆ.

**ಓದಲಾಗಿದೆ: 1.** ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಸಿ.ಓ.ಡಿ. ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಬೆಂಗಳೂರು ರವರ ಪತ್ರ ಸಂಖ್ಯೆ:ಪಿಟಿಷನ್.6/ಡಿಜಿಪಿ/ಸಿಓಡಿ/2007, ದಿನಾಂಕ 05–09–2007.

**2.** ಸರ್ಕಾರದ ಆದೇಶ ಸಂಖ್ಯೆ:ಒಇ 175 ಪೊಸಿಪ 2006, ದಿನಾಂಕ 18–10–2007.

**ಪ್ರಸ್ತಾವನೆ:**

ಪೊಲೀಸ್ ಮಹಾ ನಿರ್ದೇಶಕರು, ಸಿ.ಓ.ಡಿ. ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಬೆಂಗಳೂರು ಇವರು ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್, ಪ್ರಿನ್ಸಿಪಾಲ್, ಎ.ಪಿ.ಟಿ.ಎಸ್, ಯಲಹಂಕ, ಬೆಂಗಳೂರು ಇವರ

ವಿರುದ್ಧ ಮಾಡಲಾದ ಕರ್ತವ್ಯಲೋಪ, ದುರ್ನಡತೆ, ಅಧಿಕಾರದ ದುರುಪಯೋಗ ಈ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ಮೇಲೆ (1) ರಲ್ಲಿ ಓದಲಾದ ತಮ್ಮ ವರದಿಯಲ್ಲಿ ತಿಳಿಸಿದ್ದು, ಈ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡು ಬಂದಿರುವುದರಿಂದ ಈ ಪ್ರಾಥಮಿಕ ವರದಿಯ ಆಧಾರದ ಮೇಲೆ ಇವರು ಸುಗಮ ತನಿಖೆಗೆ ಅಡ್ಡಿಪಡಿಸಬಹುದಾದ ಹಾಗೂ ದಾಖಲೆ/ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್ ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಶ್ರೀ ಸಿ.ಎ.ಶ್ರೀನಿವಾಸ ಅಯ್ಯರ್, ಎಸ್.ಪಿ. (ಸಶಸ್ತ್ರ), ಹಿಂದಿನ ಪ್ರಿನ್ಸಿಪಾಲ್, ಎ.ಪಿ.ಟಿ.ಎಸ್. ಯಲಹಂಕ, ಬೆಂಗಳೂರು ಪ್ರಸ್ತುತ ಅಮಾನತ್ತಿನಲ್ಲಿರುವವರು, ಇವರ ವಿರುದ್ಧ ಈ ಕೆಳಕಂಡ ದೋಷಾರೋಪಣೆಗಳನ್ನು ಮಾಡಲಾಗಿದೆ.

**ದೋಷಾರೋಪಣೆ:**

1. 2006–07ನೇ ಸಾಲಿನಲ್ಲಿ ಆಧುನೀಕರಣ ಯೋಜನೆಯಡಿ ಸಶಸ್ತ್ರ ಮೀಸಲು ಪೊಲೀಸ್ ತರಬೇತಿ ಶಾಲೆ, ಯಲಹಂಕಗೆ 2,56,250–00 ರೂಪಾಯಿಗಳ ಅನುಧಾನ ಬಿಡುಗಡೆಯಾಗಿದ್ದು, ಈ ಪೈಕಿ ಸುಮಾರು 2,40,000–00 ರೂಪಾಯಿಗಳಷ್ಟು ಸಾಮಗ್ರಿಗಳನ್ನು ಸದರಿ ಪ್ರಾಂಶುಪಾಲರು ತನ್ನ ಮಗ ಶ್ರೀ.ಸಿ.ಎಸ್.ಜಗದೀಶ್ ರವರ ಹೆಸರಿನಲ್ಲಿರುವ ಶುಭ ಎಂಟರ್‌ಪ್ರೈಸಸ್ ಸಂಸ್ಥೆಯಿಂದ ಖರೀದಿಸಿ, ಈ ಹಣವನ್ನು ಚೆಕ್‌ಗಳ ಮೂಲಕ ಸದರಿ ತನ್ನ ಮಗನ ಬ್ಯಾಂಕ್ ಖಾತೆಗೆ (ಎಸ್.ಬಿ.ಐ. ವೆಸ್ಟ್ ಆಫ್ ಚಾರ್ಡ್ ರೋಡ್ ಬ್ರಾಂಚ್, ಬಸವೇಶ್ವರ, ಬೆಂಗಳೂರು) ಫೆಬ್ರವರಿ ಯಿಂದ ಮಾರ್ಚ್ 2007 ರಲ್ಲಿ ಸಂದಾಯ ಮಾಡಿರುತ್ತಾರೆ. ಶುಭ ಎಂಟರ್‌ಪ್ರೈಸಸ್ ಸಂಸ್ಥೆಯ ವಿಳಾಸ ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್ ರವರ ಮನೆಯ ವಿಳಾಸವಾಗಿರುತ್ತದೆ. ಸದರಿ ಸಿ.ಎಸ್.ಜಗದೀಶ್ ರವರ ಹೆಸರಿನಲ್ಲಿ ದಿನಾಂಕ 18–02–2007 ರಂದು ಎಸ್.ಬಿ.ಐ. ಬ್ಯಾಂಕ್‌ನಲ್ಲಿ ಖಾತೆ ತೆರೆಯಲಾಗಿದೆ. ಖಾತೆ ತೆರೆಯುವಾಗ ಸದರಿ ಪ್ರಾಂಶುಪಾಲರವರು ಇಂಟ್ರಡ್ಯೂಸರ್ (Introducer) ಆಗಿ ಸಂಬಂಧಪಟ್ಟ ದಾಖಲೆಗೆ ರುಜು ಮಾಡಿರುತ್ತಾರೆ. ಸದರಿಯವರ ಬ್ಯಾಂಕ್ ಖಾತೆ ನಂ.30128728646 ಆಗಿದ್ದು 2,40,000–00 ರೂಪಾಯಿ ಹಣ ಈ ಖಾತೆಗೆ ಸಂದಾಯವಾದ ನಂತರ, ಅದನ್ನು ಡ್ರಾ ಮಾಡಿಕೊಂಡು ದಿನಾಂಕ 08–05–2007ಕ್ಕೆ ಸದರಿ ಖಾತೆಯನ್ನು ಮುಕ್ತಾಯ ಮಾಡಿರುತ್ತಾರೆ. ಇದನ್ನು ಗಮನಿಸಲಾಗಿ ಸದರಿ ಆಧುನೀಕರಣ ಯೋಜನೆಯಲ್ಲಿ ಬಿಡುಗಡೆಯಾದ ಹಣದ ಬಗ್ಗೆ ವ್ಯವಹರಿಸಲೆಂದೇ ಈ ಖಾತೆಯನ್ನು ತೆರೆಯಲಾಗಿತ್ತೆಂದು ಕಂಡುಬರುತ್ತದೆ. ಸದರಿ ಶುಭ ಎಂಟರ್‌ಪ್ರೈಸಸ್ ಸಂಸ್ಥೆಯ ಕೊಟೇಶನ್ ಜೊತೆ ಭವಾನಿ, ಅವಿನ್ಯೂ ಮತ್ತು ಅಂಜನಾದ್ರಿ ಸಂಸ್ಥೆಯವರ ಕೊಟೇಶನ್ ನೀಡಿಲ್ಲವೆಂದೂ, ಇನ್ನು ಎರಡು ಸಂಸ್ಥೆಗಳು ಬೇನಾಮಿ ಸಂಸ್ಥೆಗಳೆಂದು ವಿಚಾರಣೆಯಲ್ಲಿ ದೃಢಪಟ್ಟಿವೆ.
2. ಪ್ರಿನ್ಸಿಪಾಲ್, ಎ.ಪಿ.ಟಿ.ಎಸ್. ಯಲಹಂಕ ಆಗಿದ್ದ ನೀವು ತರಬೇತಿ ಶಾಲೆಯ ಶಿಕ್ಷಣಾರ್ಥಿಗಳಿಂದ ಪ್ರತಿ ತಿಂಗಳು 150 ರೂಪಾಯಿಗಳನ್ನು ಎಸ್ಟಾಬ್ಲಿಷ್‌ಮೆಂಟ್ ವೆಚ್ಚಕ್ಕೆಂದು ಸಂಗ್ರಹಿಸಿರುವುದು ಕಂಡು ಬರುತ್ತದೆ. ಈ ರೀತಿಯ ಹಣ ಸಂಗ್ರಹಿಸುವುದಕ್ಕೆ ಮೇಲಾಧಿಕಾರಿಗಳಿಂದಾಗಲೀ ಸರ್ಕಾರದಿಂದಾಗಲೀ ಅನುಮತಿಯನ್ನು ಪಡೆದಿರುವುದಿಲ್ಲ. ಈ ರೀತಿಯ ಹಣ ಸಂಗ್ರಹಿಸಿರುವುದಕ್ಕೆ ಕಾರಣವನ್ನು ಕೇಳಲಾಗಿ ಈ ಹಣವನ್ನು ಕಟ್ಟಡದ ವಿದ್ಯುಚ್ಛಕ್ತಿ ಬಿಲ್, ಶಾಲೆಯ ಪಂಪ್‌ಸೆಟ್, ಸ್ವಿಮಿಂಗ್ ಪೂಲ್ ಮತ್ತು ಇತರೆ ವೆಚ್ಚಗಳಾದ ದುರಸ್ಥಿ, ಪ್ಲಂಬಿಂಗ್, ಸ್ವಿಮಿಂಗ್ ಪೂಲ್ ನಿರ್ವಹಣೆ ಇತ್ಯಾದಿಗಳ ವೆಚ್ಚಕ್ಕಾಗಿ ಬಳಸುವುದಾಗಿ ತಿಳಿಸಿದ್ದು, ಪರಿಶೀಲಿಸಲಾಗಿ ವಿದ್ಯುಚ್ಛಕ್ತಿ ಬಿಲ್ ಅನ್ನು ಇಂದಿನವರೆಗೆ ಪಾವತಿ ಮಾಡಿರುವುದಾಗಿ ಮತ್ತು ಈ ಬಾಬಿನಲ್ಲಿ ಇನ್ನು ಹಣವು ಉಳಿದಿರುವುದು ಐ.ಜಿ.ಪಿ. ತರಬೇತಿ ಇವರು ಮಾಡಿದ ತನಿಖಾ ವರದಿಯಿಂದ ತಿಳಿದು ಬರುತ್ತದೆ. ಈ ರೀತಿಯ ಎಸ್ಟಾಬ್ಲಿಷ್‌ಮೆಂಟ್ ಚಾರ್ಜ್ ಅನ್ನು ಮಾಹೆಯಾನ 50 ಸಾವಿರಕ್ಕಿಂತ ಹೆಚ್ಚು ಸಂಗ್ರಹಿಸಿದ್ದು, ಇದಕ್ಕೆ ಯಾವುದೇ ರೀತಿಯ ಲೆಕ್ಕಪತ್ರದ ರಿಜಿಸ್ಟರ್ ಗಳ ನಿರ್ವಹಣೆ ಮಾಡಿರುವುದಿಲ್ಲ. ಕೇವಲ ಬ್ಯಾಂಕ್ ಖಾತೆಯನ್ನು ತೆಗೆದು ಹಲವು ಜನರಿಗೆ ಸಂದಾಯ ಮಾಡಿರುವುದು ಕಂಡು ಬಂದಿದ್ದು, ಇದು ಯಾವ ಉದ್ದೇಶಕ್ಕೆ ಎಂಬುದಾಗಿ ಸ್ಪಷ್ಟ ಚಿತ್ರಣ ದೊರೆತಿರುವುದಿಲ್ಲ.
3. ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್ ರವರು ಸದರಿ ತರಬೇತಿ ಶಾಲೆಯ ಕ್ಷೇಮ ನಿಧಿ ಸಮಿತಿಯ ಅಧ್ಯಕ್ಷರು ಆಗಿರುತ್ತಾರೆ. ಕ್ಷೇಮನಿಧಿಯಿಂದ ಆರ್.ಪಿ.ಐ./ಪಿ.ಐ. ಮತ್ತು ಅಧೀನ ಸಿಬ್ಬಂದಿಗಳ ಮಕ್ಕಳ ವಿದ್ಯಾಭ್ಯಾಸಕ್ಕೆ ಸಹಾಯಧನ ನೀಡಲು ಕ್ಷೇಮನಿಧಿ ನಿಯಮಗಳ ಪ್ರಕಾರ ಅವಕಾಶವಿದೆ. ಆದರೆ ಸದರಿ ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್ ರವರು ಎಸ್.ಪಿ.ದರ್ಜೆಯ ಅಧಿಕಾರಿಯಾಗಿದ್ದರೂ ಸಹ ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆಂದು ಕ್ಷೇಮನಿಧಿಯಿಂದ ಸುಮಾರು 3,200 ರೂ.ಗಳ ಹಣವನ್ನು 2006ನೇ ಸಾಲಿನಲ್ಲಿ ಮಂಜೂರು ಮಾಡಿ ತೆಗೆದುಕೊಂಡಿರುತ್ತಾರೆ.
4. ಹಾಗೂ ಈ ಕೆಳಗಿನ ವೇತನ ಪಟ್ಟಿಯ ನಿರ್ವಹಣೆಯಲ್ಲಿ ಈ ಕೆಳಗಿನ ಅಕ್ರಮಗಳು ಕಂಡು ಬಂದಿದೆ.

(1) ಶ್ರೀ.ಹಾಲಪ್ಪ ಗೊರಣ್ಣವರ್, ಪಿಸಿ–1188, ಹಾವೇರಿ ಜಿಲ್ಲೆ ಮತ್ತು ಶ್ರೀ.ಕೋಟೆಪ್ಪ ಕುಬುರ್ಗಿ, ಪಿಸಿ–1086, ಹಾವೇರಿ ಜಿಲ್ಲೆ ಇವರುಗಳು ಕ್ರಮವಾಗಿ 19–05–2007 ಮತ್ತು 16–05–2007 ರಿಂದ ಗೈರು

ಹಾಜರಾಗಿರುತ್ತಾರೆ. ಆದರೆ ಅವರುಗಳ ಹೆಸರಿನಲ್ಲಿ ಗೈರು ಹಾಜರಾದ ತಿಂಗಳ ಪೂರ್ತಿ ಸಂಬಳವನ್ನು ಡ್ರಾ ಮಾಡಲಾಗಿದೆ.

(2) ಸಿಪಿಸಿ–2069, ಶ್ರೀ.ಎನ್.ಹೆಚ್.ಮರದವನವರ ಇವರಿಗೆ 2 ಬಾರಿ 2 ಕ್ರಮ ಸಂಖ್ಯೆಯಲ್ಲಿ ವೇತನವನ್ನು ಡ್ರಾ ಮಾಡಿದ್ದು ತದನಂತರ ಕೈಯಲ್ಲಿ ಮತ್ತೊಬ್ಬ ಪಿಸಿ–2049 ಶ್ರೀ.ಆರ್.ಟಿ. ರಾಮದುರ್ಗ, ಇವರ ಹೆಸರನ್ನು ಇಂಕ್ ನಲ್ಲಿ ಬರೆಯಲಾಗಿದೆ. ಆದರೆ ಇದನ್ನು ವಿಷಯ ನಿರ್ವಾಹಕರಾಗಲಿ ಮತ್ಯಾರೂ ಅಟೆಸ್ಟ್ ಮಾಡಿರುವುದಿಲ್ಲ.

(3) ಜಿಪಿಎಫ್‌ನ ರಿಜಿಸ್ಟರ್ ಅನ್ನು ನಿಯಮನುಸಾರ ನಿರ್ವಹಿಸಿರುವುದಿಲ್ಲ. ಹಾಗೂ ಜಿಪಿಎಫ್ ರೆಕವರಿಗಳನ್ನು ಪ್ರತ್ಯೇಕ ರಿಜಿಸ್ಟರ್ ನಲ್ಲಿ ಆಫೀಸ್ ಪ್ರೊಸೀಜರ್ ಅನ್ವಯ ನಿರ್ವಹಿಸಿರುವುದಿಲ್ಲ.

**ಸರ್ಕಾರದ ಆದೇಶ ಸಂಖ್ಯೆ : ಒಇ 175 ಪೊಸಿಪ 2006, ಬೆಂಗಳೂರು, ದಿನಾಂಕ 30ನೇ ಅಕ್ಟೋಬರ್, 2007.**

ಮೇಲ್ಕಂಡ ದೋಷಾರೋಪಣೆಗಳ ಹಿನ್ನೆಲೆಯಲ್ಲಿ ಶ್ರೀ.ಸಿ.ಎ.ಶ್ರೀನಿವಾಸ ಅಯ್ಯರ್, ರವರು ತಮ್ಮ ಕರ್ತವ್ಯದಲ್ಲಿ ಲೋಪವೆಸಗಿರುವುದು ಮೇಲ್ನೋಟಕ್ಕೆ ಪ್ರಾಥಮಿಕ ತನಿಖಾ ವರದಿಯಲ್ಲಿ ಕಂಡು ಬಂದಿರುವ ಕಾರಣ ಕೆ.ಎಸ್.ಪಿ (ಡಿಪಿ) ನಿಯಮಗಳು, 1965/89ರ ನಿಯಮ 6 ರನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದೆ. ಈ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ.ಪ್ರತಾಪ್ ರೆಡ್ಡಿ, ಐಪಿಎಸ್, ಡಿ.ಐ.ಜಿ. ವೈರ್‌ಲೆಸ್, ಬೆಂಗಳೂರು ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಈ ಸಂಬಂಧ ಆರೋಪಿತ ಪೊಲೀಸ್ ಅಧಿಕಾರಿಯ ವಿರುದ್ಧದ ದೋಷಾರೋಪಣೆ ಪತ್ರವನ್ನು ಹೊರಡಿಸಲಾಗಿದೆ. ಈ ವಿಚಾರಣೆಯನ್ನು ನಿಯಮಾನುಸಾರ ನಡೆಸಿ 3 ತಿಂಗಳೊಳಗಾಗಿ ಸರ್ಕಾರಕ್ಕೆ ವರದಿಯನ್ನು ಕಳುಹಿಸಿಕೊಡಲು ಸೂಚಿಸಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1999

**ವಿಷಯ:** ಶ್ರೀ.ಎನ್.ಡಿ.ನಾಯ್ಕ್, (ನಿವೃತ್ತ) ಪಿಎಸ್ಐ ಹಾಗೂ ಶ್ರೀ.ಆರ್.ವಿ.ಕಾಮತ್, ಸಿಹೆಚ್‌ಸಿ 471, ಹೊನ್ನಾವರ ಠಾಣೆ ರವರುಗಳ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶವನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ: 1.** ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಉತ್ತರ ಕನ್ನಡ, ಕಾರವಾರ ರವರ ಆದೇಶ ಸಂಖ್ಯೆ:ಸಿಬ್ಬಂದಿ(2)ಇವಿ–11/05–06, ದಿನಾಂಕ 17–04–2006 ಮತ್ತು 04–06–2007.

**2.** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಅಪೀಲು(1)24/2006–07, ದಿನಾಂಕ 27–01–2007 ಮತ್ತು 11–07–2007.

**ಪ್ರಸ್ತಾವನೆ:**

ಶ್ರೀ.ಎನ್.ಡಿ.ನಾಯ್ಕ್, ಈ ಹಿಂದಿನ ಪಿ.ಎಸ್.ಐ., (ಹಾಲಿ ನಿವೃತ್ತಿ) ಹಾಗೂ ಶ್ರೀ.ಆರ್.ವಿ.ಕಾಮತ್, ಸಿ.ಹೆಚ್.ಸಿ. 471 ಹೊನ್ನಾವರ ಠಾಣೆ ರವರುಗಳ ವಿರುದ್ಧ ಈ ಕೆಳಗಿನ ಆರೋಪಗಳಿಗಾಗಿ ಸದರಿ ರವರುಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತಿನ ನಡವಳಿಗಳು) ನಿಯಮಾವಳಿಗಳು, 1965/89ರ ನಿಯಮ 6 ಮತ್ತು 8 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಮೇಲೆ (1) ರಲ್ಲಿ ಓದಲಾದ ನಡವಳಿ ದಿನಾಂಕ 17–04–2006 ರಲ್ಲಿ ಡಿ.ಎಸ್.ಪಿ. ದಾಂಡೇಲಿ ಉಪ ವಿಭಾಗ ಉತ್ತರ ಕನ್ನಡ ಜಿಲ್ಲೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿರುತ್ತದೆ.

**ಆರೋಪ:**

ಶ್ರೀ.ಎನ್.ಡಿ.ನಾಯ್ಕ್, ಪಿ.ಎಸ್.ಐ. ಈ ಹಿಂದೆ ಹೊನ್ನಾವರ ಪೊಲೀಸ್ ಠಾಣೆ, ಹಾಲಿ ಕಡಲು ಪಡೆ ಕಾರವಾರ ಮತ್ತು ಸಿ.ಹೆಚ್.ಸಿ. 471 ಶ್ರೀ.ಆರ್.ವಿ.ಕಾಮತ್, ಹೊನ್ನಾವರ ಪೊಲೀಸ್ ಠಾಣೆ ನೀವುಗಳು ಜವಾಬ್ದಾರಿಯುತ ಪೊಲೀಸ್ ಅಧಿಕಾರಿಗಳಾಗಿ ಠಾಣೆಗೆ ಪರಿಶೀಲನೆಗಾಗಿ ಬಂದ ಪಾಸ್‌ಪೋರ್ಟ್‌ಗಳನ್ನು ಸರಿಯಾಗಿ ಪರಿಶೀಲನೆ ನಡೆಸದೇ ಮುರ್ಡೇಶ್ವರ ಪೊಲೀಸ್ ಠಾಣೆ ಗುನ್ನಾ ನಂ–22/06 ಮತ್ತು 25/2006 ನೇದ್ದರಲ್ಲಿ ಆರೋಪಿತರೊಂದಿಗೆ ಶಾಮೀಲಾಗಿ ಪಾಸ್‌ಪೋರ್ಟ್ ಅರ್ಜಿ ಬಗ್ಗೆ ನಿಷ್ಠೆಯಿಂದ ಪ್ರಾಮಾಣಿಕತೆಯಿಂದ ವಿಚಾರಣೆ ಮಾಡದೆ ದುರುದ್ದೇಶದಿಂದ ಆರೋಪಿಗಳಿಗೆ ಅನುಕೂಲ ಮಾಡಿಕೊಡಲು ನಾಗರಾಜ ರಾಯಸ್ ಈತನ ಹೆಸರಿನಲ್ಲಿ ನೀಡಿದ ಪಾಸ್‌ಪೋರ್ಟ್ ಅರ್ಜಿಯನ್ನು ಶಿಫಾರಸ್ಸು ಮಾಡಿ ಮೇಲಾಧಿಕಾರಿಗಳಿಗೆ ವಿಶ್ವಾಸ ದ್ರೋಹ ಬಗೆದು ಇಲಾಖೆಗೆ ಕುಂದುಂಟು ಮಾಡುವಂತೆ ನಡೆದುಕೊಂಡ ಬಗ್ಗೆ ದೋಷಾರೋಪಣೆ.

ಇಲಾಖಾ ವಿಚಾರಣಾಧಿಕಾರಿಗಳು ಈ ಇಲಾಖಾ ವಿಚಾರಣೆಯನ್ನು ನಿಯಮಾನುಸಾರ ನಡೆಸಿ ಈ ಕೆಳಗಿನಂತೆ ಅಭಿಪ್ರಾಯ ನೀಡಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 121 ಪೊಸಇ 2007, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2007**

ಶ್ರೀ.ಎನ್.ಡಿ.ನಾಯ್ಕ್, ಪಿಎಸ್ಐ (ನಿವೃತ್ತ) ರವರು ಮೃತಪಟ್ಟಿರುವುದರಿಂದ ಇವರ ವಿರುದ್ಧ ಇರುವ ಇಲಾಖಾ ವಿಚಾರಣೆಯಲ್ಲಿ ಸಾಬೀತಾದ ಆರೋಪವನ್ನು ಕೈಬಿಟ್ಟು ಸದರಿಯವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಿ ಆದೇಶಿಸಲಾಗಿದೆ. ಹಾಗೂ ಶ್ರೀ.ಆರ್.ವಿ.ಕಾಮತ್, ಸಿಹೆಚ್‌ಸಿ 471, ರವರ ವಿರುದ್ಧ ಆರೋಪವು ಸಾಬೀತಾಗದ ಕಾರಣ ಇವರನ್ನು ದೋಷಮುಕ್ತಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1781

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ.ಮರಿಗೌಡ ಪಿಎಸ್ಐ (ನಿವೃತ್ತ) ಶ್ರೀರಾಂಪುರ ಪೊಲೀಸ್ ಠಾಣೆ ಬೆಂಗಳೂರು ನಗರ ರವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಸರ್ಕಾರದಿಂದ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಪೊಲೀಸ್ ಕಮೀಷನರ್,ಬೆಂಗಳೂರು ರವರ ನಡವಳಿಗಳ ಆದೇಶ ಸಂಖ್ಯೆ:43/ಡಿಇ–1/ಆರ್.6/ 2004, ದಿನಾಂಕ 01–07–2004.
2. ಸಹಾಯಕ ಪೊಲೀಸ್ ಕಮೀಷನರ್ ಹಾಗೂ ಇಲಾಖಾ ವಿಚಾರಣಾಧಿಕಾರಿಗಳು, ಬೆಂಗಳೂರು ನಗರ ರವರ ವರದಿ ಸಂಖ್ಯೆ:ಎಸಿಪಿ/ಡಿಇ/05/04, ದಿನಾಂಕ 28–02–2007.
3. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಅಪೀಲು(1)10/07–08, ದಿನಾಂಕ 25–06–2007.

**ಪ್ರಸ್ತಾವನೆ:**

ಶ್ರೀ. ಮರಿಗೌಡ, ಪಿ.ಎಸ್.ಐ (ನಿವೃತ್ತ) ಶ್ರೀರಾಂಪುರ ಪೊಲೀಸ್ ಠಾಣೆ ಬೆಂಗಳೂರು ರವರ ವಿರುದ್ಧ ಪೊಲೀಸ ಆಯುಕ್ತರು ಬೆಂಗಳೂರು ನಗರ ರವರು ಮೇಲೆ (1) ರಲ್ಲಿ ಓದಲಾದ ಅದೇಶದಲ್ಲಿ ಕೆ.ಎಸ್.ಪಿ (ಡಿಪಿ) ನಿಯಮವಳಿ 1965/89 ನಿಯಮ 6ರ ಮೇರೆಗೆ ಈ ಕೆಳಕಂಡ ಅರೋಪಿಗಳ ಮೇಲೆ ಇಲಾಖಾ ವಿಚಾರಣೆ ಅದೇಶಿಸಿ ಸಹಾಯಕ ಪೊಲೀಸ್ ಕಮೀಷನರ್ ವಿಚಾರಣೆಗಳು ಬೆಂಗಳೂರು ನಗರ ರವರನ್ನು ಇಲಾಖಾ ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತಾರೆ.

**ಅರೋಪಗಳು:**

ಶ್ರೀ.ಮರಿಗೌಡ, ಪಿ.ಎಸ್.ಐ, ಶ್ರೀರಾಂಪುರ ಪೊಲೀಸ್ ಠಾಣೆ, ಬೆಂಗಳೂರು ನಗರ ಅದ ನೀವು ದಿನಾಂಕ 27-04-2004 ರಂದು ಶ್ರೀರಾಂಪುರ ಪೊಲೀಸು ಠಾಣೆಯಲ್ಲಿದ್ದು, ಠಾಣಗೆ ದೂರು ನೀಡಲು ಬಂದಂತಹ ಶ್ರೀಮತಿ. ಲಕ್ಷ್ಮೀ ಹಾಗೂ ಶ್ರೀಮತಿ.ಸುಶೀಲ, ಶ್ರೀಮತಿ.ಕ್ಯಾತಾಯಿಣಿ, ಶ್ರೀಮತಿ.ಸಾಕಮ್ಮ, ಅಶಾ ಸಾವಿತ್ರಮ್ಮ, ಭಾಗ್ಯಮ್ಮ ರವರು ಬಂದ ಸಮಯದಲ್ಲಿ ಅವರುಗಳ ಎದುರಿನಲ್ಲಿ ಅಸಹ್ಯ ಹಾಗೂ ಅಸ ಭ್ಯವಾಗಿ ಕುಳಿತುಕೊಂಡು, ಶ್ರೀಮತಿ.ಸುಶೀಲ ಇವರ ಕಡೆ ನೋಡಿಕೊಂಡು ಕೈ ಸನ್ನೆ, ಕಣ್ಣ ಸನ್ನೆಗಳನ್ನು ಅಸ್ಯಹವಾಗಿ ಮಾಡಿರುತ್ತೀರಿ. ಹಾಗೂ ಮೂರು ದಿನಗಳ ನಂತರ ತನಿಖೆ ಸಂಬಂಧ ಠಾಣೆಗೆ ಬಂದ ಸಮಯದಲ್ಲಿ ನೀವು ಶ್ರೀಮತಿ.ಸುಶೀಲರವರಿಗೆ ಅರೋಪಿಗಳನ್ನು ತೋರಿಸಲು ರಾತ್ರಿ 9 ಗಂಟೆಗೆ ಅಥವಾ ಮೂರನೇ ದಿನ ಬೆಳಿಗ್ಗೆ 5 ಗಂಟೆಗೆ ಒಬ್ಬರೇ ಬರುವಂತೆ ತಿಳಿಸಿರುತ್ತೀರಿ. ಹಾಗೂ ಶ್ರೀಮತಿ ಸುಶೀಲರವರ ಕೈ ಹಿಡಿದುಕೊಂಡಿರುತ್ತೀರಿ. ಈ ರೀತಿ ಜವಾಬ್ದಾರಿಯುತ ಪೊಲೀಸು ಅಧಿಕಾರಿಯಾದ ನೀವು ಠಾಣೆಗೆ ಬರುವ ಮಹಿಳೆಯವರಿಗೆ ಸೂಕ್ತ ಮಾರ್ಯಾದೆ ನೀಡದೆ. ಅವರೊಂದಿಗೆ ಅಸಭ್ಯವಾಗಿ ನಡೆದುಕೊಂಡು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಹಾಗೂ ಇಲಾಖೆಯ ಗೌರವಕ್ಕೆ ಕುಂದುಂಟು ಮಾಡಿರುತ್ತೀರಿ.

ಶ್ರೀ.ಮರಿಗೌಡ, ಪಿಎಸ್ಐ, ಶ್ರೀರಾಮಪುರ ಪೊಲೀಸ್ ಠಾಣೆ, ಬೆಂಗಳೂರು ನಗರ ಅದ ನೀವು ಶ್ರೀರಾಮಪುರ ಪೊಲೀಸು ಠಾಣೆಯ ಮೊ ಸಂ .87:04 ಕಲಂ. 406-420 ಭಾ.ದಂ.ಸಂ. ಪ್ರಕರಣದಲ್ಲಿ ತನಿಖಾಧಿಕಾರಿಯಾಗಿ, ಅರೋಪಕ್ಕೆ ಸಂಬಂಧಿಸಿದಂತೆ ಮಾಲುಗಳನ್ನು ಅಮಾನತ ಪಡಿಸಬೇಕಾಗಿದ್ದರೂ ಸಹ ಶ್ರೀಮತಿ .ಲಕ್ಷ್ಮೀ ಇವರಿಗೆ ಸಂಬಂಧಿಸಿದ ಒಂದು ಜೊತೆ ಬಂಗಾರದ ಬಳೆಗಳನ್ನು ಅಮಾನತಪಡಿಸಿರುವುದಿಲ್ಲ ಹಾಗೂ ಪಿರ್ಯಾದಿನಲ್ಲಿ ತಿಳಿಸಿರುವ ಮಾಲುಗಳನ್ನು ಪೂರ್ಣವಾಗಿ ಅಮಾನತಪಡಿಸದೇ ಇದ್ದರೂ ಸಹ ದೋಷಾರೋಪಣ ಪತ್ರ ಸಲ್ಲಿಸಿದ್ದು, ಸದರಿ ದೋಷಾರೋಪಣ ಪತ್ರದಲ್ಲಿ ಅಮಾನತಪಡಿಸದೇ ಇರುವಂತಹ

ಮಾಲಿನ ವಿವರಣೆಯನ್ನು ಬರೆದು ಮುಂದೆ ದೋಷಾರೋಪಣ ಪತ್ರ ಸಲ್ಲಿಸುವ ಬಗ್ಗೆ ಯಾವುದೇ ಸಮೂದು ಮಾಡಿರುವುದಿಲ್ಲ. ಹಾಗು ಈ ಬಗ್ಗೆ ಸಿಆರ್‌ಪಿಸಿ ಕಲಂ. 173 ಕ್ಲಾಸ (8) ರ ಪ್ರಕಾರ ದೋಷಾರೋಪಣ ಪತ್ರ ಹಾಗೂ ಪ್ರಕರಣ ವರದಿಗಳಲ್ಲಿ ನಮೂದು ಮಾಡಿರುವುದಿಲ್ಲ ಈ ರೀತಿ ಉದ್ದೇಶಪೂರ್ವಕವಾಗಿ ತನಿಖೆಯಲ್ಲಿ ತೀವ್ರ ನಿರ್ಲಕ್ಷತೆ ತೋರಿ ಅರೋಪಿಗಳು ಅರೋಪದಿಂದ ತಪ್ಪಿಸಿಕೊಳ್ಳಲು ಸಹಾಯ ಮಾಡಿರುತ್ತಿರಿ.

ಶ್ರೀ.ಮರಿಗೌಡ, ಪಿಎಸ್‌ಐ, ಶ್ರೀರಾಂಪುರ ಪೊಲೀಸ್ ಠಾಣೆ, ಬೆಂಗಳೂರು ನಗರ ಅದ ನೀವು ದಿನಾಂಕ 15-05-2004 ರಂದು ಪೊಲೀಸು ಠಾಣೆಯಲ್ಲಿರುವಾಗ್ಗೆ ಶ್ರೀಮತಿ.ಸುಶೀಲ, ಶ್ರೀಮತಿ.ಕ್ಯಾತ್ಯಾಯಿಸಿ, ಶ್ರೀಮತಿ.ಸಾವಿತ್ರಮ್ಮ, ಶ್ರೀಮತಿ ಸಾಕಮ್ಮ, ಶ್ರೀಮತಿ ಭಾಗ್ಯಮ್ಮ ರವರುಗಳು ಠಾಣೆಗೆ ಹಾಜರಾಗಿ, ಅರೋಪಿಗಳಾದ ಶ್ರೀಮತಿ ಕಂಚನಾ ಹಾಗೂ ನಯನ ಎಂಬುವರು ತಮ್ಮಗಳಿಂದ ಹಣವನ್ನು ಪಡೆದು ಸೈಟುಗಳನ್ನು ಕೊಡಿಸುವುದಾಗಿ ನಂಬಿಸಿ, ಸೈಟುಗಳನ್ನು ಕೊಡಿಸದೇ ಹಣ ಮೋಸ ಮಾಡಿದ್ದಾರೆ ಎಂದು ದೂರು ನೀಡಿದರೂ ಸಹ ನೀವು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ ಹಾಗೂ ಅರೋಪಿಗಳಾದ ಶ್ರೀಮತಿ ಕಾಂಚನಾ ಹಾಗೂ ನಯನರವರನ್ನು ದಸ್ತಗಿರಿ ಮಾಡಿದ್ದ ಸಮಯದಲ್ಲಿ ಅವರನ್ನು ಸದರಿ ಮೋಸ ಪಡಿಸಿದ ಹಣದ ಬಗ್ಗೆ ಪ್ರಶ್ನಿಸದೇ ಉದ್ದೇಶ ಪೂರ್ವಕ ನಿರ್ಲಕ್ಷತೆ ತೋರಿರುತ್ತೀರಿ.

ಇಲಾಖಾ ವಿಚಾರಣಾಧಿಕಾರಿಗಳು ಈ ಇಲಾಖಾ ವಿಚಾರಣೆಯ ಸಮಯದಲ್ಲಿ ಅಭಿಯೋಗದ ಪರವಾಗಿ ಮತ್ತು ರಕ್ಷಣಾ ಪರವಾಗಿ ಸಾಕ್ಷಿದಾರರ ಹೇಳಿಕೆಗಳು ಮತ್ತು ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು ಶ್ರೀ.ಮರಿಗೌಡ, ಪಿ.ಎಸ್.ಐ ರವರ ವಿರುದ್ಧ ಅರೋಪಗಳು ಸಾಬೀತಾಗಿರುವುದಿಲ್ಲ ಎಂದು ವರದಿ ಮಾಡಿರುತ್ತಾರೆ.

ಶ್ರೀ.ಮರಿಗೌಡ, ಪಿಎಸ್‌ಐ(ಹಾಲಿನಿವೃತ್ತಿ) ರವರು ದಿನಾಂಕ 28-02-2006 ರಂದು ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ ನಿಯಮಗಳು ನಿಯಮ 214(1) (ಎ) ಪ್ರಕಾರ ಅಂತಿಮ ಅದೇಶ ಹೊರಡಿಸಲು ಮತ್ತು ಸದರಿ ರವರು ದಿನಾಂಕ 01-07-2004 ರಿಂದ 03-11-2004ರ ಅಮಾನತ್ತಿನ ಅವಧಿಯನ್ನು ಇತ್ಯರ್ಥಗೊಳಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 238 ಪೊಸಇ 2007, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್, 2007**

ಶ್ರೀ.ಮರಿಗೌಡ, ಪಿ.ಎಸ್.ಐ. ಹಾಲಿ ನಿವೃತ್ತ ರವರ ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧ ಆರೋಪಗಳು ಸಾಬೀತಾಗಿರುವುದಿಲ್ಲದಿರುವುದರಿಂದ ನಿವೃತ್ತ ಅಧಿಕಾರಿಯನ್ನು ಇಲಾಖಾ ವಿಚಾರಣೆಯ ದೋಷಾರೋಪಣೆಗಳಿಂದ ದೋಷಮುಕ್ತಗೊಳಿಸಲಾಗಿದೆ. ಹಾಗೂ ಇವರು ದಿನಾಂಕ 01–07–2004 ರಿಂದ 03–11–2004 ರ ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1782

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ.ಸಿ.ಬಿ.ಪಾಟೀಲ್, ಪಿ.ಐ., ಖಡೇಬಜಾರ ಪೊಲೀಸ್ ಠಾಣೆ ಬೆಳಗಾಂ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರ ಆದೇಶ ಸಂಖ್ಯೆ:ಸಿಬ್ಬಂದಿ 3/ಪಿ.ಆರ್./227/05, ದಿನಾಂಕ:21-4-2006
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/70/ಈವ/2006/5076 ದಿನಾಂಕ:13-10-2006
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18-12-2006
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/60/2006-07, ದಿನಾಂಕ: 5-2007

**ಪ್ರಸ್ತಾವನೆ:**

ಶ್ರೀ.ಸಿ.ಬಿ.ಪಾಟೀಲ್, ಪಿ.ಐ., ಖಡೇಬಜಾರ ಪೊಲೀಸ್ ಠಾಣೆ ಬೆಳಗಾಂ ಜಿಲ್ಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

ಮಾರ್ಕೆಟ್‌ಯಾರ್ಡ್ ಪೊಲೀಸ್ ಠಾಣೆಯಲ್ಲಿ ವಾರೆಂಟ್ ಬಜಾವಣೆ ಕರ್ತವ್ಯ ನಿರ್ವಹಿಸುತ್ತಿರುವ ಸಿ.ಹೆಚ್.ಸಿ.81 ಸಿದ್ರಾಮಪ್ಪ ಇವರು 33 ಪ್ರಕರಣಗಳಲ್ಲಿ ವಾರೆಂಟ್‌ಗಳನ್ನು ಆರೋಪಿತರಿಗೆ ಬಜಾವಣೆ ಮಾಡದೇ ನ್ಯಾಯಾಲಯಕ್ಕೆ ವಾಪಸ್ ಮಾಡಿದ್ದು, ಇವರ ಕರ್ತವ್ಯ ನಿರ್ವಹಣೆ ಪರಿಶೀಲನೆ ಮಾಡದೇ ಹಾಗೂ ಸದರಿ ವಾರೆಂಟ್‌ಗಳನ್ನು ಯಾವ ಕಾರಣಕ್ಕಾಗಿ ನ್ಯಾಯಾಲಯಕ್ಕೆ ವಾಪಸ್ ಕಳುಹಿಸಲಾಗಿದೆ ಎನ್ನುವ ಬಗ್ಗೆ ಮೇಲ್ವಿಚಾರಣೆಯನ್ನು ಸೂಕ್ತ ರೀತಿಯಲ್ಲಿ ಮಾಡದೇ ಇಬ್ಬರು ವಿಫಲರಾಗಿದ್ದು, ಇವರ ಕರ್ತವ್ಯದ ಮೇಲ್ವಿಚಾರಣೆಯನ್ನು ಮಾಡುವಲ್ಲಿ ಸಂಪೂರ್ಣ ನಿರ್ಲಕ್ಷ್ಯತನ ತೋರಿಸಿ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಪ್ರದರ್ಶಿಸಿದ್ದು ಅಂತಾ ಆಪಾದಿಸಿದ್ದು ಇರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 21-4-2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಯಾಗದಂತೆ ಆರು ತಿಂಗಳ ಕಾಲ ಮೂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:13-10-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವುದೇ ಹೊಸ ಅಂಶಗಳನ್ನು ಅರ್ಜಿಯಲ್ಲಿ ತಿಳಿಸಿರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 312 ಪೊಸಿಅ 2007 ಬೆಂಗಳೂರು, ದಿನಾಂಕ:19ನೇ ನವೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಸಿ.ಬಿ.ಪಾಟೀಲ್, ಪಿ.ಐ., ಖಡೇಬಜಾರ ಪೊಲೀಸ್ ಠಾಣೆ ಬೆಳಗಾಂ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 2098 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ. ರವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಒಇ ೨೩ ಪೊಸಿಪ ೨೦೦೭, ದಿನಾಂಕ ೧೪-೦೬-೨೦೦೭.

2. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ(೫)೨೨/೨೦೦೬-೦೭ ದಿನಾಂಕ ೦೭-೦೯-೨೦೦೭.

**ಪ್ರಸ್ತಾವನೆ:**

ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ. ರವರ ವಿರುದ್ಧ ಶ್ರೀ ರಾಮಸಿರೋಮಣಿ ಉರುಫ್ ರಮಣಿ ನಿಹಾರ್ ಯಾದವ್ ಸಾಕೀನ್ ವಾಸ್ಕೋಡಿಗಾಮಾ, ಗೋವಾ ಇವರ ಪಿಸ್ತೂಲ್ ನಂ: 323305 ನ್ನು ಪೊಲೀಸ್ ಠಾಣೆಯ ಭದ್ರತೆಯಲ್ಲಿ ಇಡದೇ, ಕರ್ತವ್ಯ ಲೋಪ ಎಸಗಿರುತ್ತಾರೆಂದು ಈ ಸಂಬಂಧ ಇತರ ದೋಷಾರೋಪಣೆಯನ್ನು ಮಾಡಿ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965/89ರ ನಿಯಮ 6ರ ಅನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಲಾಗಿದೆ. ಸದರಿ ಇಲಾಖಾ ವಿಚಾರಣೆಯನ್ನು ನಡೆಸಲು ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೆಂಗಳೂರು ಜಿಲ್ಲೆ ರವರನ್ನು ವಿಶೇಷ ಅಧಿಕಾರಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಈ ಇಲಾಖಾ ವಿಚಾರಣೆಗೆ 7ಜನ ಸಾಕ್ಷಿದಾರರನ್ನು ಗೋವಾ ಮತ್ತು

ಬೆಳಗಾವಿ ವಿಭಾಗದಿಂದ ಬಂದು ಬೆಂಗಳೂರಿನಲ್ಲಿ ಸಾಕ್ಷಿ ನುಡಿಯ ಬೇಕಾಗಿರುವುದರಿಂದ ವಿಚಾರಣೆಗೆ ವಿಳಂಬವಾಗುತ್ತದೆ ಎಂದು ಇಲಾಖಾ ವಿಚಾರಣಾಧಿಕಾರಿಯನ್ನು ಬದಲಾಯಿಸಿಕೊಡಲು ಕೋರಿ ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ. ರವರು ಸಲ್ಲಿಸಿದ್ದ ಮನವಿಯನ್ನು ಪರಿಗಣಿಸಿ ಡಿ.ಜಿ.ಪಿ. ರವರು ಮೇಲೆ ಓದಲಾದ(2)ರ ಪತ್ರದಲ್ಲಿ ಇಲಾಖಾ ವಿಚಾರಣಾಧಿಕಾರಿಯನ್ನು ಬದಲಾಯಿಸಿ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಚಿತ್ರದುರ್ಗ ಜಿಲ್ಲೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಸರ್ಕಾರಕ್ಕೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2007, ಬೆಂಗಳೂರು, ದಿನಾಂಕ:13ನೇ ಸೆಪ್ಟೆಂಬರ್, 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ. ರವರ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965/89ರ ನಿಯಮ 6ರ ಪ್ರಕಾರ ಇಲಾಖಾ ವಿಚಾರಣೆಯನ್ನು ನಡೆಸಲು ಎಸ್.ಪಿ. ಬೆಂಗಳೂರು ಜಿಲ್ಲೆ ರವರ ಬದಲಾಗಿ ಎಸ್.ಪಿ. ಚಿತ್ರದುರ್ಗ ಜಿಲ್ಲೆ ರವರನ್ನು ವಿಶೇಷ ಅಧಿಕಾರಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಈ ವಿಚಾರಣೆಯನ್ನು ನಿಯಮಾನುಸಾರ ತನಿಖೆ ನಡೆಸಿ 1 ತಿಂಗಳೊಳಗಾಗಿ ಅಂತಿಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 1662

**ವಿಷಯ:** ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಪೊಲೀಸ್ ಉಪಾಧೀಕ್ಷಕರು, ಬಸವನಬಾಗೇವಾಡಿ ಉಪ ವಿಭಾಗ, ಬಸವನಬಾಗೇವಾಡಿ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ; ಲೋಕ್/ಐಎನ್‌ವಿ/(ಜಿ)ಎಲ್–43/ಸಿಆರ್–8/2007, ಬಿಜೆಪಿ ದಿನಾಂಕ
30–10–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 410 ಪೊಸಿಪ 2007, ಬೆಂಗಳೂರು, ದಿನಾಂಕ 22ನೇ ನವೆಂಬರ್, 2007**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ವರದಿಯಲ್ಲಿ ದಿನಾಂಕ 25–10–2007ರಂದು ಈ ಪ್ರಕರಣದ ಫಿರ್ಯಾದಿ ಶ್ರೀ ಮಹದೇವಪ್ಪ ಕೆಂಚಪ್ಪ ಹಿರೇಕುರುಬರ್, ಕನಕಾಲ ಗ್ರಾಮ, ಬಸವನಬಾಗೇವಾಡಿ ತಾಲ್ಲೂಕು ರವರು ಬಿಜಾಪುರ ಲೋಕಾಯುಕ್ತ ಪೊಲೀಸ್ ಠಾಣೆಗೆ ಖುದ್ದು ಹಾಜರಾಗಿ ನೀಡಿರುವ ಲಿಖಿತ ದೂರಿನ ಸಾರಾಂಶವೇನೆಂದರೆ, ಬಸವನಬಾಗೇವಾಡಿ ಪೊಲೀಸ್ ಠಾಣೆಯ ಮೊ.ಸಂ.152/07ರಲ್ಲಿ ದಾಖಲಾದ ಪ್ರಕರಣದಲ್ಲಿ, ಫಿರ್ಯಾದುದಾರರ ಸಹೋದರಿ ಹಾಗೂ ಇನ್ನಿಬ್ಬರು ಮಹಿಳೆಯರ ಹೆಸರುಗಳನ್ನು ದೋಷಾರೋಪಣಾ ಪತ್ರವನ್ನು ಸಲ್ಲಿಸುವಾಗ ತೆಗೆದು ಹಾಕಲು ಆಪಾದಿತ ಅಧಿಕಾರಿ ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಪೊಲೀಸ್ ಉಪಾಧೀಕ್ಷಕರು, ಬಸವನಬಾಗೇವಾಡಿ ಉಪ ವಿಭಾಗ, ಬಸವನಬಾಗೇವಾಡಿ ರವರು ರೂ. 20,000/–ಗಳ ಲಂಚದ ಹಣಕ್ಕೆ ಒತ್ತಾಯಿಸಿರುತ್ತಾರೆ. ಫಿರ್ಯಾದಿಯವರಿಗೆ ಲಂಚ ಕೊಡಲು ಇಷ್ಟವಿಲ್ಲದ್ದರಿಂದ ಸದರಿ ಆರೋಪಿತ ಅಧಿಕಾರಿಗಳ ಮೇಲೆ ಸೂಕ್ತ ಕಾನೂನು ಕ್ರಮ ಕೋರಿರುತ್ತಾರೆ.

ಮೇಲ್ಕಂಡ ಲಿಖಿತ ದೂರನ್ನು ಆಧರಿಸಿ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬಿಜಾಪುರರವರು ಸದರಿ ಆರೋಪಿತ ಸರ್ಕಾರಿ ನೌಕರರ ಮೇಲೆ ಭ್ರಷ್ಟಾಚಾರ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ:8/2007ರ ಪ್ರಕಾರ ಪ್ರಕರಣವನ್ನು ದಿನಾಂಕ 25–10–2007ರಂದು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಪಂಚ ಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿನಾಂಕ 25–10–2007ರಂದು ಆಪಾದಿತರ ಕಛೇರಿಯಲ್ಲಿ ಬೀಸಿದ (ಟ್ರಾಪ್) ಬಲೆಯಲ್ಲಿ ಆರೋಪಿತರಾದ ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಪೊಲೀಸ್ ಉಪಾಧೀಕ್ಷಕರುರವರು ಫಿರ್ಯಾದುದಾರರಿಂದ ರೂ. 20,000/– ಗಳ ಲಂಚದ ಹಣವನ್ನು ಪಡೆಯುತ್ತಿರುವಾಗ ಲಂಚದ ಹಣದೊಡನೆ ಸಿಕ್ಕಿ ಹಾಕಿಕೊಂಡಿರುತ್ತಾರೆ. ಆಪಾದಿತರ ಮೇಜಿನ ಮೇಲಿದ್ದ ಕಛೇರಿ ಕಡತದ ಅಡಿಯಿಂದ ಲಂಚದ ಹಣವನ್ನು ಯಥಾವತ್ತಾಗಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ ಹಾಗೂ ಸಂಬಂಧಪಟ್ಟ ದಾಖಲೆಗಳನ್ನು ವಶಪಡಿಸಿಕೊಳ್ಳಲಾಗಿದೆ. ಸಾಕ್ಷಿದಾರರು ಫಿರ್ಯಾದಿಯಿಂದ ಆರೋಪಿತರು ಲಂಚವನ್ನು ಪಡೆದಿರುವ ಅಂಶದ ಬಗ್ಗೆ ಸ್ಪಷ್ಟವಾಗಿ ನುಡಿದಿರುತ್ತಾರೆ. ಆರೋಪಿತರನ್ನು ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರುಪಡಿಸಲಾಗಿದೆ.

ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡು ಬಂದಿರುವುದರಿಂದ ಈ ಪ್ರಾಥಮಿಕ ವರದಿಯ ಆಧಾರದ ಮೇಲೆ ಇವರು ಸುಗಮ ತನಿಖೆಗೆ ಅಡ್ಡಿಪಡಿಸಬಹುದಾದ ಹಾಗೂ ದಾಖಲೆ / ಸಾಕ್ಷ್ಯಧಾರಗಳನ್ನು

ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತು ಗೊಳಿಸುವುದು ಅವಶ್ಯಕವೆಂದು ಸರ್ಕಾರವು ಭಾವಿಸಿರುವುದರಿಂದ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಪೊಲೀಸ್ ಉಪಾಧೀಕ್ಷಕರು, ಬಸವನಬಾಗೇವಾಡಿ ಉಪ ವಿಭಾಗ, ಬಸವನ ಬಾಗೇವಾಡಿ ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಪೊಲೀಸ್ ಉಪಾಧೀಕ್ಷಕರು, ಬಸವನಬಾಗೇವಾಡಿ ಉಪ ವಿಭಾಗ, ಬಸವನ ಬಾಗೇವಾಡಿ ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ. ಇವರ ಲೀನ್ ಅನ್ನು ಬದಲಾಯಿಸಿ, ಡಿವೈ.ಎಸ್.ಪಿ, ಡಿ.ಸಿ.ಆರ್.ಬಿ. ಗದಗ ಇಲ್ಲಿಗೆ ಸ್ಥಳಾಂತರಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಪೊಲೀಸ್ ಉಪಾಧೀಕ್ಷಕರು ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 2072

ಸರ್ಕಾರದ ಅಧೀನ ಕಾರ್ಯದರ್ಶಿಗಳು

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಮಕದೂಮ್, ಶಾಖಾಧೀಕ್ಷಕರು, (ಕಾ ಮತ್ತು ಸು) ಪೊಲೀಸ್ ಪ್ರಧಾನ ಕಚೇರಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಅಪೀಲು (3)/16/1997–98, ದಿನಾಂಕ 12–9–2007.

**ಪ್ರಸ್ತಾವನೆ:**

ಶ್ರೀ ಪಿ.ಎ. ಮಕದೂಮ್, ಶಾಖಾಧೀಕ್ಷಕರು ಪೊಲೀಸ್ ಕಮೀಷನರ್, ಬೆಂಗಳೂರು ನಗರ ರವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11ರ ಮೇರೆಗೆ ಈ ಕೆಳಗೆ ನಮೂದಿಸಿರುವ ದೋಷಾರೋಪಣೆ ಮೇಲೆ ಇಲಾಖಾ ವಿಚಾರಣೆಯನ್ನು ನಡೆಸಲು ಡೆಪ್ಯೂಟಿ ಪೊಲೀಸ್ ಸೂಪರಿಂಟೆಂಡೆಂಟ್, ಪೊಲೀಸ್ ಪ್ರಧಾನ ಕಛೇರಿ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದು, ಅವರು ಕ್ರಮಬದ್ಧವಾದ ಇಲಾಖಾ ವಿಚಾರಣೆಯನ್ನು ನಡೆಸಿ ದಿನಾಂಕ 3–5–2003ರಂದು ಅಂತಿಮ ವಿಚಾರಣಾ ವರದಿಯಲ್ಲಿ ದೋಷಾರೋಪಣೆಗಳು ಸಾಬೀತಾಗಿದೆಯೆಂದು ತಿಳಿಸಿರುತ್ತಾರೆ.

**ದೋಷಾರೋಪಣೆ:**

1. ಶ್ರೀ ಪಿ.ಎ. ಮಕದೂಮ್, ಶಾಖಾಧೀಕ್ಷಕರು ಆದ ನೀವು ಪೊಲೀಸ್ ಆಯುಕ್ತರು, ಬೆಂಗಳೂರು ನಗರ ರವರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 1995–96 ಮತ್ತು 1997ರ ವರ್ಷಗಳಿಗೆ ಸಂಬಂಧಿಸಿದಂತೆ 86 ಕಾಗದ ಪತ್ರಗಳನ್ನು ನೀವು ಸುಪರ್ದಿನಲ್ಲೇ ಇಟ್ಟುಕೊಂಡಿದ್ದು, ಅವುಗಳ ಮೇಲೆ ಯಾವುದೇ ಕ್ರಮ ಕೈಗೊಳ್ಳದೆ ಹಿರಿಯ ಅಧಿಕಾರಿಗಳ ಗಮನಕ್ಕೆ ತರದೇ ಬಾಕಿ ಉಳಿಸಿಕೊಂಡು ಕರ್ತವ್ಯದಲ್ಲಿ ಲೋಪವೆಸಗಿ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

2. ನೀವು ಪೊಲೀಸ್ ಆಯುಕ್ತರು, ಬೆಂಗಳೂರು ನಗರದ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕು.ಎಸ್.ಆರ್. ಸಾವಿತ್ರಿ, ದ್ವಿ.ದ.ಸ. ಮುಂಬಡ್ತಿ ನೀಡುವ ಕಡತವನ್ನು ಮಂಡಿಸದೆ ವಿಳಂಬಿಸಿ ಸೂಕ್ತ ಕ್ರಮ ಕೈಗೊಳ್ಳದಿರುವುದು ಹಾಗೂ ಡಿ.ಸಿ.ಪಿ. ಸಿ.ಎ.ಆರ್. (ಕೇಂದ್ರ) ಬೆಂಗಳೂರು ರವರ ಕಛೇರಿಯಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀಮತಿ ಎಂ.ಎನ್. ರಾಜೇಶ್ವರಿ ದಲಾಯತ್ ರವರಿಗೆ ದ್ವಿತೀಯ ದರ್ಜೆ ಸಹಾಯಕಿ ಹುದ್ದೆಗೆ ಬಡ್ತಿ ನೀಡುವಂತೆ ಕೋರಿ ಸಲ್ಲಿಸಿದ ಅರ್ಜಿಯನ್ನು ಶ್ರೀಮತಿ ಸುಂದರಮ್ಮ, ಆಡಳಿತಾಧಿಕಾರಿಗಳು, ಪೊಲೀಸ್ ಆಯುಕ್ತರವರ ಕಛೇರಿ ಬೆಂಗಳೂರು ನಗರ ರವರು ಸೂಚನೆ ನೀಡಿದ್ದರೂ ಸಹ ಮಂಡಿಸದೆ ಕರ್ತವ್ಯ ಲೋಪವೆಸಗಿರುತ್ತೀರಿ.

3. ಶ್ರೀ ಪಂಪಾಪತಿ, ಪ್ರಥಮ ದರ್ಜೆ ಸಹಾಯಕರು ರವರಿಗೆ ಸಿಬ್ಬಂದಿ ಶಾಖೆಯ ಕರ್ತವ್ಯವನ್ನು ದಿನಾಂಕ 23–9–1997ರ ಆದೇಶದ ಪ್ರಕಾರ ನೀಡಲು ಆದೇಶಿಸಿದರು ನೀಡದೆ ಕರ್ತವ್ಯಚ್ಯುತಿ ಹಾಗೂ ಉದ್ದಟತನ ಪ್ರದರ್ಶಿಸಿದ್ದೀರಿ.

ವಿಚಾರಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ದೋಷಾರೋಪಣೆಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಅವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಗಳ ಕಾಲ ಮುಂದಿನ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡಿ ದಿನಾಂಕ 13–2–2004ರಲ್ಲಿ ಶಿಸ್ತು ಪ್ರಾಧಿಕಾರಿಯು ಆದೇಶ ಹೊರಡಿಸಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಡಿಜಿ ಮತ್ತು ಐಜಿಪಿ ರವರಿಂದ ಕಂಡಿಕೆವಾರು ಷರಾ ಮತ್ತು ದಾಖಲೆಗಳನ್ನು ಪಡೆಯಲಾಗಿದೆ. ದಾಖಲೆಗಳನ್ನು ಪರಿಶೀಲಿಸಲಾಗಿ ಕರ್ತವ್ಯ ಲೋಪದ ಬಗ್ಗೆ ವಿಚಾರಣೆ ಮಾಡಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಗಳ ಕಾಲ ಮುಂದಿನ ವೇತನ ಬಡ್ತಿಗೆ ಧಕ್ಕೆ ಆಗದಂತೆ ಮುಂದೂಡಿ ದಿನಾಂಕ 13–2–2004ರಲ್ಲಿ ಆದೇಶ ಹೊರಡಿಸಲಾಗಿದೆ.

ಆದರೆ ಈ ಆದೇಶವನ್ನು ಸದರಿಯವರಿಗೆ 5–2–2007ರಂದು ಜಾರಿ ಮಾಡಲಾಗಿದ್ದು, ತಮಗೆ ಮುಂಬಡ್ತಿಯನ್ನು ತಪ್ಪಿಸುವ ಉದ್ದೇಶದಿಂದ 3 ವರ್ಷಗಳ ನಂತರ ಜಾರಿ ಮಾಡಲಾಗಿದೆಯೆಂದು ಅರ್ಜಿದಾರರು ಆರೋಪಿಸಿರುತ್ತಾರೆ. ಡಿಜಿ ಮತ್ತು ಐಜಿಪಿ ರವರು ಸಹ ಇದು ನಿಜವೆಂದು ತಿಳಿಸುತ್ತಾ ಆದೇಶವನ್ನು ಜಾರಿ ಮಾಡಲು ವಿಳಂಬ ಮಾಡಿರುವ ಸಿಬ್ಬಂದಿ ಮೇಲೆ ಶಿಸ್ತು ಕ್ರಮ ಜರುಗಿಸುತ್ತಿರುವುದಾಗಿ ತಿಳಿಸಿರುತ್ತಾರೆ. ದಿನಾಂಕ 13–2–2004ರ ಆದೇಶವನ್ನು ಅರ್ಜಿದಾರರಿಗೆ ಜಾರಿ ಮಾಡಿದಲ್ಲಿ ಒಂದು ವರ್ಷದ ನಂತರ ಅರ್ಜಿದಾರರು ಮುಂಬಡ್ತಿ ಪಡೆಯಲು ಅರ್ಹರಾಗಿರುತ್ತಿದ್ದರು. ಆದರೆ ಈ ಆದೇಶವನ್ನು 5–2–2007ರಂದು ಜಾರಿ ಮಾಡಲಾಗಿದ್ದು ಈಗ ಅವರಿಗೆ ಚಾಲ್ತಿ ಶಿಕ್ಷೆ ಇರುವುದರಿಂದ ಮುಂಬಡ್ತಿಯಿಂದ ವಂಚಿತರಾಗಿರುವುದ ರಿಂದ ಮೇಲ್ಮನವಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಡಿಜಿ ಮತ್ತು ಐಜಿಪಿ ರವರು ಮೇಲೆ ಓದಲಾದ (1)ರ ಪತ್ರದಲ್ಲಿ ಅರ್ಜಿದಾರರ ಮೇಲ್ಮನವಿಯನ್ನು ತಿರಸ್ಕರಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 38 ಪೊಸಿಲಿ 2007, ಬೆಂಗಳೂರು, ದಿನಾಂಕ 18ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 27ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ

ಶ್ರೀ ಮಕದೂಮ್, ಶಾಖಾಧೀಕ್ಷಕರು, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಅವರಿಗೆ ವಿಧಿಸಲಾದ ಶಿಕ್ಷೆಯನ್ನು ಮಾರ್ಪಡಿಸಿ 'ಎಚ್ಚರಿಕೆ' ನೀಡುವ ಶಿಕ್ಷೆ ವಿಧಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1907

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ತಿದ್ದುಪಡಿ ಆದೇಶ**

**ಸಂಖ್ಯೆ; ಹೆಚ್‌ಡಿ:06:ಪಿಎಫ್‌ಎಸ್:2007, ಬೆಂಗಳೂರು, ದಿನಾಂಕ 20ನೇ ನವೆಂಬರ್, 2007**

ಪೊಲೀಸ್ ಪಡೆ ಆಧುನೀಕರಣ ಯೋಜನೆ ಅಡಿಯಲ್ಲಿ ಅನುದಾನಕ್ಕೆ ಸಂಬಂಧಿಸಿದಂತೆ, ದಿನಾಂಕ 9–11–2007ರ ಸಮಸಂಖ್ಯೆಯ ಆದೇಶದಲ್ಲಿ ಬಿಡುಗಡೆ ಮಾಡಿರುವ ರೂ. 46.54 ಕೋಟಿಗಳ ಅನುದಾನಕ್ಕೆ ಬದಲಾಗಿ ರೂ. 46,54,58,727/ ಗಳೆಂದು (ನಲವತ್ತಾರು ಕೋಟಿ ಐವತ್ತ ನಾಲ್ಕು ಲಕ್ಷ ಐವತ್ತೆಂಟು ಸಾವಿರದ ಏಳು ನೂರ ಇಪ್ಪತ್ತೇಳು ರೂಪಾಯಿಗಳು ಮಾತ್ರ) ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ:1254:ವೆಚ್ಚ–6:2007, ದಿನಾಂಕ 13–11–2007ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಪಿ.ಆರ್. 2069

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಕರ್ನಾಟಕ ಸಾರ್ವಜನಿಕ ಸಂಗ್ರಹಗಳಲ್ಲಿ ಪಾರದರ್ಶಕ ಕಾಯ್ದೆ 1999ರ ಕಲಂ 14(ಎ) ರನ್ವಯ ತುರ್ತು ಅವಶ್ಯಕತೆಯಡಿಯಲ್ಲಿ ಹುಬ್ಬಳ್ಳಿ–ಧಾರವಾಡ ನಿರ್ಮಿಸಿದ ಫುಟ್‌ಪಾತ್ ಕಾಮಗಾರಿಯ ಅವಧಿಯನ್ನು ತುರ್ತು ಅವಧಿ ಎಂದು ಘೋಷಿಸುವ ಕುರಿತು.

**ಓದಲಾಗಿದೆ: 1)** ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ, ಹುಬ್ಬಳ್ಳಿ ಇವರ ಪತ್ರ ಸಂಖ್ಯೆ: ಎಚ್‌ಡಿ ಎಂಸಿ 61–12–06 ದಿನಾಂಕ 14–12–2006.

**2.** ಲೋಕೋಪಯೋಗಿ ಇಲಾಖೆಯ ಸುತ್ತೋಲೆ ಸಂಖ್ಯೆ: ಪಿಡಬ್ಲ್ಯೂಡಿ 381 ಅಕೋ–3/2006, ದಿನಾಂಕ 10–11–2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ದಿನಾಂಕ 24–6–2005 ರಿಂದ 31–8–2005ರ ಅವಧಿಯಲ್ಲಿ ವಾಹನ ಸಂಚಾರ ಹಾಗೂ ಪಾದಚಾರಿಗಳ ಸುಲಲಿತ ಸಂಚಾರಕ್ಕಾಗಿ ರಸ್ತೆ ಅಗಲೀಕರಣ ಹಾಗೂ ಅಕ್ರಮ ಕಟ್ಟಡಗಳನ್ನು ತೆರವುಗೊಳಿಸುವ ಕಾರ್ಯಾಚರಣೆಯನ್ನು ಹಮ್ಮಿಕೊಂಡು ಕೆಲವೊಂದು ಫುಟ್‌ಪಾತ್ ಕಾಮಗಾರಿಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಗಳಲ್ಲಿ ಪಾರದರ್ಶಕ ಕಾಯ್ದೆ 1999ಗಳನ್ನು ಉಲ್ಲಂಘನೆ

ಮಾಡಿ ಟೆಂಡರ್ ಕರೆಯದ ಕಾಮಗಾರಿಯನ್ನು ಸದರಿ ಪಾರದರ್ಶಕ ಕಾಯ್ದೆ 4(ಎ)ರನ್ವಯ ತುರ್ತು ಅವಧಿಯ ಕಾಮಗಾರಿಯೆಂದು ಘೋಷಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 03 ಎಹೆಚ್‌ಡಿ 2007, ಬೆಂಗಳೂರು, ದಿನಾಂಕ 21ನೇ ನವೆಂಬರ್, 2007**

ಮೇಲೆ ವಿವರಿಸಿರುವ ಪ್ರಸ್ತಾವನೆ ಹಿನ್ನಲೆಯಲ್ಲಿ, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ದಿನಾಂಕ 24–6–2005 ರಿಂದ 31–8–2005ರ ಅವಧಿಯಲ್ಲಿ ವಾಹನ ಸಂಚಾರ ಹಾಗೂ ಪಾದಚಾರಿಗಳ ಸುಲಲಿತ ಸಂಚಾರಕ್ಕಾಗಿ ರಸ್ತೆ ಅಗಲೀಕರಣ ಹಾಗೂ ಅಕ್ರಮ ಕಟ್ಟಡಗಳನ್ನು ತೆರವುಗೊಳಿಸುವ ಕಾರ್ಯಾಚರಣೆಯನ್ನು ಹಮ್ಮಿಕೊಂಡು ಕೆಲವೊಂದು ಫುಟ್‌ಪಾತ್ ಕಾಮಗಾರಿಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಗಳಲ್ಲಿ ಪಾರದರ್ಶಕ ಕಾಯ್ದೆ 1999 ಅನ್ನು ಉಲ್ಲಂಘಿಸಿ, ಟೆಂಡರ್ ಕರೆಯದೇ ಅತಿ ತುರ್ತಾಗಿ ಕಾರ್ಯಗತಗೊಳಿಸಿರುವ ಕಾಮಗಾರಿಗಳಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ 1999ರ ಕಲಂ 4(ಎ) ರನ್ವಯ ತುರ್ತು ಅವಧಿಯ ಕಾಮಗಾರಿಯೆಂದು ಪರಿಗಣಿಸಿ, ಸದರಿ ಕಾಮಗಾರಿಗಳನ್ನು ಪೂರ್ಣಗೊಳಿಸಿರುವುದಕ್ಕೆ ಸರ್ಕಾರದ ಘಟನೋತ್ತರ ಮಂಜೂರಾತಿ ನೀಡಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಲ್. ಬಸಲಿಂಗೋಳ**

ಪಿ.ಆರ್. 2063

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ನಾಗರಾಜಪ್ಪ ಹೊನ್ನಾಳ್, ಹಿಂದಿನ ತಹಶೀಲ್ದಾರ್, ಬ್ಯಾಡಗಿ ತಾಲ್ಲೂಕು ಇವರ ವಿರುದ್ಧದ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:** **1)** ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಇವರ ಪತ್ರದ ಸಂ. ಸಿಎಫ್‌ಎಸ್/ಇಎಸ್‌ಟಿ (2)/24/2003–04, 12–1–2007.

**2)** ಕಾರಣ ಕೇಳುವ ನೋಟೀಸ್ ಸಂ. ಆರ್‌ಡಿ 14 ಎಡಿಇ 2007, ದಿನಾಂಕ 31–5–2007.

**3)** ಶ್ರೀ ನಾಗರಾಜಪ್ಪ ಹೊನ್ನಾಳ್ ಇವರ ಲಿಖಿತ ಸಮಜಾಯಿಷಿ ದಿನಾಂಕ 22–6–2007.

**ಪ್ರಸ್ತಾವನೆ:**

ಶ್ರೀ ನಾಗರಾಜಪ್ಪ ಹೊನ್ನಾಳ, ಹಿಂದಿನ ತಹಶೀಲ್ದಾರ್, ತಾಲ್ಲೂಕು ಕಛೇರಿ, ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ ಇವರು ಅಂತ್ಯೋದಯ ಕಾರ್ಡುಗಳ ವಿತರಣೆಯನ್ನು ಮಾಡುವಾಗ ಅನರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಿದ್ದು, ಕೇವಲ ಆಹಾರ ನಿರೀಕ್ಷಕರು ವರದಿಯ ಆಧಾರದ ಮೇಲೆ ವರದಿ ಸಲ್ಲಿಸಿರುವುದು ಹಾಗೂ ಅಂತ್ಯೋದಯ ಕಾರ್ಡುಗಳ ಫಲಾನುಭವಿಗಳು ಕಡಿಮೆ ಆದ ನಂತರವೂ ಆಹಾರ ಧಾನ್ಯಗಳನ್ನು ಬಿಡುಗಡೆ ಮಾಡಿರುವುದು ಕಾನೂನು ಬಾಹಿರವಾಗಿದ್ದು, ಈ ರೀತಿಯ ಕರ್ತವ್ಯ ಲೋಪ ಎಸಗಿರುವ ಕಾರಣ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ, ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ಮೇಲ್ಕಂಡ ಪತ್ರದಲ್ಲಿ ಪ್ರಸ್ತಾಪಿಸಿರುವ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಿತ ಅಧಿಕಾರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ 31–5–2007ರ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಯಿತು. ಕ್ರ.ಸಂ. (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ನಾಗರಾಜಪ್ಪ ಹೊನ್ನಾಳ್, ತಹಶೀಲ್ದಾರ್ ಇವರು ತಮ್ಮ ವಿರುದ್ಧ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ. ಹಾಗೂ ತಮ್ಮ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಈ ಹಿನ್ನಲೆಯಲ್ಲಿ ಆಪಾದಿತ ಅಧಿಕಾರಿ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 14 ಎಡಿಇ 2007, ಬೆಂಗಳೂರು, ದಿನಾಂಕ 3ನೇ ನವೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ನಾಗರಾಜಪ್ಪ ಹೊನ್ನಾಳ್, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ನಂ. 1171, 10ನೇ 'ಬಿ' ಕ್ರಾಸ್, ಯಲಹಂಕ ಉಪನಗರ, ಬೆಂಗಳೂರು–560 064 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ

ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಹಾವೇರಿ ಜಿಲ್ಲೆ ಇವರನ್ನು ಮಂಡನಾಧಿ ಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ / ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ದಿನಾಂಕ 23–8–2005ರ ಸರ್ಕಾರಿ ಆದೇಶ ಸಂ. ಸಿಆಸುಇ 16 ಸೇಇವಿ 2005ರನ್ವಯ ರೂ. 6,000/– (ಆರು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ. 1,000/– (ಒಂದು ಸಾವಿರ ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು ಹಾವೇರಿ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ಚೌಕಿಮಠ**

ಪಿ.ಆರ್. 2038

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3).

## ಪಶು ಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ರಾಜ್ಯದ ಅತ್ಯಂತ ಹಿಂದುಳಿದ, ಹೆಚ್ಚು ಹಿಂದುಳಿದ ಹಾಗೂ ಹಿಂದುಳಿದ ತಾಲ್ಲೂಕುಗಳಲ್ಲಿ ನೂತನ ಪಶು ಚಿಕಿತ್ಸಾಲಯಗಳನ್ನು ಪ್ರಾರಂಭಿಸಿರುವುದಕ್ಕೆ ಹುದ್ದೆಗಳನ್ನು ಸೃಜನೆ ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:** **1.** ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 217 ಪಸಸೇ 2007, ದಿನಾಂಕ 31–8–2007

**2.** ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಪಸಂ/ಡಿವಿಡಿ–3/ವಿವ–13/2005–06, ದಿನಾಂಕ 26–10–2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯದ ಅತ್ಯಂತ ಹಿಂದುಳಿದ ತಾಲ್ಲೂಕು, ಹೆಚ್ಚು ಹಿಂದುಳಿದ ತಾಲ್ಲೂಕು ಹಾಗೂ ಹಿಂದುಳಿದ ತಾಲ್ಲೂಕುಗಳಲ್ಲದೇ ಇನ್ನಿತರೆ ಕೆಲವು ತಾಲ್ಲೂಕುಗಳಲ್ಲಿ ಪ್ರಸ್ತುತ ಇರುವ ಪಶು ಚಿಕಿತ್ಸಾಲಯಗಳ ಅಂತರ ಕೆಲವು ಕಡೆ ಹೆಚ್ಚಾಗಿದ್ದು, ಗ್ರಾಮೀಣ ಪ್ರದೇಶದ ಜಾನುವಾರುಗಳಿಗೆ ಪಶು ಚಿಕಿತ್ಸಾ ಸೌಲಭ್ಯ ಒದಗಿಸಲು ಅಂತಹ ಸ್ಥಳಗಳಲ್ಲಿಯೂ ಸಹ ಹೊಸ ಪಶು ಚಿಕಿತ್ಸಾಲಯಗಳನ್ನು ಪ್ರಾರಂಭಿಸುವ ಅವಶ್ಯಕತೆ ಇದ್ದ ಕಾರಣ ಅಂತಹ ಸ್ಥಳಗಳಲ್ಲಿ 160 ನೂತನ ಪಶು ಚಿಕಿತ್ಸಾಲಯಗಳನ್ನು ತೆರೆಯಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುತ್ತಾ ಪ್ರತಿಯೊಂದು ನೂತನ ಪಶುಚಿಕಿತ್ಸಾಲಯಗಳಿಗೆ ಈ ಕೆಳಗೆ ನಮೂದಿಸಿದ ಅಗತ್ಯ ಸಿಬ್ಬಂದಿ ವರ್ಗವನ್ನು ಸೃಷ್ಟಿಸಿ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

| ಕ್ರ. ಸಂ. | ಹುದ್ದೆಯ ಹೆಸರು | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಪಶುವೈದ್ಯಾಧಿಕಾರಿ | ರೂ. 12000–22650 | 160 |
| 2 | ಪಶುವೈದ್ಯಕೀಯ ಪರೀಕ್ಷಕರು | ರೂ. 6250–12000 | 160 |
| 3 | ಡಿ–ದರ್ಜೆ ನೌಕರರು | ರೂ. 4800–7275 | 320 |
| | | **ಒಟ್ಟು** | **640** |

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 217 ಪಸಸೇ 2007, ಬೆಂಗಳೂರು, ದಿನಾಂಕ 14ನೇ ನವೆಂಬರ್, 2007**

ಆಯುಕ್ತರು, ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿ, ಈ ಕೆಳಕಂಡ ಅಗತ್ಯ ಸಿಬ್ಬಂದಿ ವರ್ಗವನ್ನು ಈ ಕೆಳಗೆ ನಮೂದಿಸಲಾಗಿರುವ ಷರತ್ತುಗಳಿಗೆ ಒಳಪಟ್ಟು ಸೃಷ್ಟಿಸಲಾಗಿದೆ.

| ಕ್ರ. ಸಂ. | ಒಂದು ಪಶುಚಿಕಿತ್ಸಾಲಯಕ್ಕೆ ಬೇಕಾದ ಅಗತ್ಯ ಸಿಬ್ಬಂದಿ ವರ್ಗ | 160 ಪಶುಚಿಕಿತ್ಸಾಲಯಗಳಿಗೆ |
|---|---|---|
| 1 | ಪಶುವೈದ್ಯಾಧಿಕಾರಿ – 1 | 160 ಹುದ್ದೆಗಳು |
| 2 | ಪಶುವೈದ್ಯಕೀಯ ಪರೀಕ್ಷಕರು–1 | 160 ಹುದ್ದೆಗಳು |
| 3 | ಡಿ–ದರ್ಜೆ ನೌಕರರು–2 | 320 ಹುದ್ದೆಗಳು |
| | **ಒಟ್ಟು –4** | **640 ಹುದ್ದೆಗಳು** |

**ಷರತ್ತುಗಳು**

1. ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನಲ್ಲಿ ಜಿಲ್ಲಾ ವಲಯದ ಲೆಕ್ಕ ಶೀರ್ಷಿಕೆ 2403–00–101–0–71 (ಯೋಜನೆ) ಅಡಿ ರೂ. 2223.65 ಲಕ್ಷ ಅನುದಾನವನ್ನು ಹಾಗೂ ಲೆಕ್ಕ ಶೀರ್ಷಿಕೆ 2403–00–800–0–59 (ಯೋಜನೆ) ಅಡಿ ರೂ. 649.59 ಲಕ್ಷ ಅನುದಾನವನ್ನು ಒದಗಿಸಲಾಗಿದ್ದು, ಆಯವ್ಯಯದಲ್ಲಿ ಒಟ್ಟಾರೆ 28.73 ಕೋಟಿ ಅನುದಾನ ಒದಗಿಸಲಾಗಿದ್ದು, ಅದರಡಿಯಲ್ಲಿ ಭರಿಸತಕ್ಕದ್ದು.
2. ಮೇಲ್ಕಂಡ ಹುದ್ದೆಗಳನ್ನು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಅನುಸಾರ ಭರ್ತಿ ಮಾಡತಕ್ಕದ್ದು ಹಾಗೂ ಡಿ–ದರ್ಜೆ ನೌಕರರನ್ನು ಬಾಹ್ಯ ಮೂಲದಿಂದ ಮಾತ್ರ ಭರ್ತಿ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 447 ವೆಚ್ಚ–4/07, ದಿನಾಂಕ 29–8–2007ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ–ಎ).

ಪಿ.ಆರ್. 2062

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಮಹಮದ್ ಗೌಸ್ ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ ಬದಲಿ ವಿಚಾರಣಾಧಿಕಾರಿಯವರನ್ನು ನೇಮಿಸುವ ಬಗ್ಗೆ–ಪರಿಷ್ಕೃತ ಆದೇಶ.

**ಓದಲಾಗಿದೆ:** **1)** ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 120 ಎಸ್ಇಎನ್ 2003, ದಿನಾಂಕ 13–7–2007.

**2)** ಜಿಲ್ಲಾಧಿಕಾರಿ, ಚಾಮರಾಜನಗರ ಜಿಲ್ಲೆರವರ ಪತ್ರ ಸಂಖ್ಯೆ: ಸಿಬ್ಬಂದಿ (2) ಸಿಆರ್/01–2003–04, ದಿನಾಂಕ 22–8–2007.

**ಪ್ರಸ್ತಾವನೆ:**

ಶ್ರೀ ಮಹಮ್ಮದ ಗೌಸ್ ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 13–7–2007ರ ಪರಿಷ್ಕೃತ ಸರ್ಕಾರಿ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆರವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿ ಆದೇಶ ಹೊರಡಿಸಲಾಗಿರುತ್ತದೆ. ವಿಚಾರಣಾಧಿಕಾರಿಯಾದ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆರವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಈ ಪ್ರಕರಣದಲ್ಲಿ ನಿವೃತ್ತ ಅಧಿಕಾರಿಯಾದ ಶ್ರೀ ಮಹಮ್ಮದ್ ಗೌಸ್ ಇವರ ವಿರುದ್ಧ ಇಲಾಖಾ ವಿಚಾರಣೆಗಾಗಿ ಜಿಲ್ಲಾಧಿಕಾರಿಗಳೇ ಶಿಫಾರಸ್ಸು ಮಾಡಿರುವುದರಿಂದ ಜಿಲ್ಲಾಧಿಕಾರಿಗಳು ವಿಚಾರಣಾಧಿಕಾರಿಯಾಗಿ ಕಾರ್ಯನಿರ್ವಹಿಸಲು ರಹವಿಲ್ಲ ವಾದ್ದರಿಂದ, ಬದಲಿ ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶವನ್ನು ಹೊರಡಿಸುವಂತೆ ಕೋರಿದ್ದಾರೆ. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ವಿಚಾರಣೆ ನಡೆಸಲು ಬದಲಿ ವಿಚಾರಣಾಧಿಕಾರಿಯನ್ನು ನೇಮಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 120 ಎಸ್ಇಎನ್ 2003, (ಸಿಆಸುಇ 163 ಕೆಇವಿ 2007)**

**ಬೆಂಗಳೂರು, ದಿನಾಂಕ 29ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ನ್ನು ಓದಿಕೊಂಡಂತೆ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಹಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಇವರ ಮೇಲೆ ಹೊರಿಸಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ದಿನಾಂಕ 13–7–2007ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದ್ದ, ಜಿಲ್ಲಾಧಿಕಾರಿಗಳು,

ಚಾಮರಾಜನಗರ ಜಿಲ್ಲೆರವರ ಬದಲಿಗೆ ಜಿಲ್ಲಾಧಿಕಾರಿಗಳು ಮೈಸೂರು ಜಿಲ್ಲೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 03 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿಯನ್ನು ಸಲ್ಲಿಸುವುದು.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಜಿಲ್ಲಾಧಿಕಾರಿಗಳು ಕೇಂದ್ರ ಸ್ಥಾನಿಕ ಸಹಾಯಕರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಅವರೇ ಮಂಡನಾಧಿಕಾರಿಯಾಗಿ ಮುಂದುವರೆಯುತ್ತಾರೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–2).

ಪಿ.ಆರ್. 1941

**ವಿಷಯ:** ಸಣ್ಣ ನೀರಾವರಿ ಇಲಾಖೆಗೆ ಎರಡು ಬೆರಳಚ್ಚುಗಾರರ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ:** ಸರ್ಕಾರದ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸನೀಇ 01 ಮಸಾವಿ 07, ದಿನಾಂಕ 10–1–2007.

**ಪ್ರಸ್ತಾವನೆ:**

ಸರ್ಕಾರದ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇವರು ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ, ಸಣ್ಣ ನೀರಾವರಿ ಇಲಾಖೆಯ ಜಲಸಂಪನ್ಮೂಲ ಇಲಾಖಾ ವ್ಯಾಪ್ತಿಯಲ್ಲಿದ್ದರೂ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತಿದ್ದು, ಹಾಲಿ ತಾಂತ್ರಿಕ ಶಾಖೆ ಮತ್ತು ಸಣ್ಣ ನೀರಾವರಿ ಎಂಬ ಎರಡು ಶಾಖೆಗಳನ್ನು ಹೊಂದಿದ್ದರೂ ಸಹ ಯಾವುದೇ ಬೆರಳಚ್ಚುಗಾರರ ಹುದ್ದೆಗಳು ಮಂಜೂರಾಗಿರುವುದಿಲ್ಲ ಎಂದು ತಿಳಿಸಿ, ಈ ಎರಡೂ ಶಾಖೆಗಳ ಕಾರ್ಯದೊತ್ತಡ ಅಧಿಕವಾಗಿರುವ ಕಾರಣ ಸಚಿವಾಲಯದಲ್ಲಿನ ಶಾಖೆಗಳ ಸಿಬ್ಬಂದಿ ವರ್ಗದ ಮಾದರಿ ಅನ್ವಯ ತಲಾ 1 ರಂತೆ ಒಟ್ಟು 2 ಬೆರಳಚ್ಚುಗಾರರ ಹುದ್ದೆಗಳನ್ನು ಸೃಜಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಆಬೆಸೇ 2007, ಬೆಂಗಳೂರು, ದಿನಾಂಕ 9ನೇ ಅಕ್ಟೋಬರ್, 2007**

ಕರ್ನಾಟಕ ಸರ್ಕಾರ ಸಚಿವಾಲಯದ ಸಣ್ಣ ನೀರಾವರಿ ಇಲಾಖೆಯಲ್ಲಿನ ತಾಂತ್ರಿಕ ಶಾಖೆ ಹಾಗೂ ಸಣ್ಣ ನೀರಾವರಿ ಶಾಖೆಗೆ ತಲಾ ಒಂದು ಬೆರಳಚ್ಚುಗಾರರ (ಒಟ್ಟು–2–ಎರಡು) ಹುದ್ದೆಗಳನ್ನು ಸೃಜಿಸಲು ಮಂಜೂರಾತಿಯನ್ನು ನೀಡಲಾಗಿದೆ.

ಈ ಹುದ್ದೆಗಳ ಬಾಬ್ತು ತಗಲುವ ವೆಚ್ಚವನ್ನು ಇಲಾಖೆಯ ಅನುದಾನದಲ್ಲೇ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ1808 ವೆಚ್ಚ–5/2007; ದಿನಾಂಕ 7–9–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವ್ಹಿ.ಎಸ್. ಜೇರೆ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಆಡಳಿತ–2).

ಪಿ.ಆರ್. 1847

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
**1)** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 2 ಸಸಿವಿ 2002, ದಿನಾಂಕ 23–1–2002.
**2)** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 36 ಸಸಿವಿ 2004, ದಿನಾಂಕ 14–6–2005.
**3)** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸಸಿವಿ 2006, ದಿನಾಂಕ 5–1–2006

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶ ದಿನಾಂಕ 23–1–2002ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ದಿನಾಂಕ 18–2–2002 ರಿಂದ ಜಾರಿಗೆ ಬರುವಂತೆ ಹಾಗೂ 1 ವರ್ಷದ ಅವಧಿಗೆ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿತ್ತು. ಸದರಿ ಹುದ್ದೆಗಳನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ 14–6–2005ರ ಸರ್ಕಾರಿ ಆದೇಶದಲ್ಲಿ ದಿನಾಂಕ 1–1–2005ರಿಂದ 31–12–2005ರವರೆಗೂ ಹಾಗೂ ಮೇಲೆ (3)ರಲ್ಲಿ ಓದಲಾದ ದಿನಾಂಕ 5–1–2006ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ 31–12–2006ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿತ್ತು.

| | | |
|---|---|---|
| 1. | ಪ್ರಧಾನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಐ.ಎ.ಎಸ್. ಅಧಿಕಾರಿಯಿಂದ ತುಂಬುವುದು) | 1 ಹುದ್ದೆ |
| 2. | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2/ಪತ್ರಾಂಕಿತ ಆಪ್ತ ಸಹಾಯಕ) | 1 ಹುದ್ದೆ |
| 3. | ಶೀಘ್ರಲಿಪಿಗಾರ (ಪತ್ರಾಂಕಿತ ಆಪ್ತ ಸಹಾಯಕ/ಹಿರಿಯ ಶೀಘ್ರಲಿಪಿಗಾರ) | 2 ಹುದ್ದೆ |
| 4. | ಭಾಷಾಂತರಕಾರರು (ಶಾಖಾಧಿಕಾರಿ)–ಹಿರಿಯ ಸಹಾಯಕ | 1 ಹುದ್ದೆ |
| 5. | ಕಿರಿಯ ಸಹಾಯಕ | 1 ಹುದ್ದೆ |
| 6. | ವಾಹನ ಚಾಲಕ | 1 ಹುದ್ದೆ |
| 7. | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **9 ಹುದ್ದೆಗಳು** |

ಮೇಲ್ಕಂಡ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಹಾಗೂ ಪೂರಕ 8 ಸಿಬ್ಬಂದಿ ಹುದ್ದೆಗಳ ಮುಂದುವರಿಕೆಯು ದಿನಾಂಕ 31–12–2006ರಂದು ಮುಕ್ತಾಯಗೊಂಡಿರುವುದರಿಂದ ಸದರಿ ಹುದ್ದೆಗಳನ್ನು ಮುಂದುವರಿಸಲು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 547 ಸಅಸೇ 2007, ಬೆಂಗಳೂರು, ದಿನಾಂಕ 21ನೇ ನವೆಂಬರ್ 2007**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಹಾಗೂ ಪ್ರಸ್ತಾವನೆಯಲ್ಲಿ ವಿವರಿಸಿರುವ ಪೂರಕ 8 ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ 1–1–2007 ರಿಂದ 31–12–2007ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ; ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 2067 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–3).

**ವಿಷಯ:** ಮುಖ್ಯಮಂತ್ರಿಯವರ ಸಂಸದೀಯ ವ್ಯವಹಾರಗಳ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿನ ಗ್ರೂಪ್–ಬಿ ಹುದ್ದೆಯೊಂದನ್ನು ಗ್ರೂಪ್–ಎ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯಮಂತ್ರಿಯವರ ಸಂಸದೀಯ ವ್ಯವಹಾರಗಳ ಕಾರ್ಯದರ್ಶಿ ಇವರ ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ/555/2007, ದಿನಾಂಕ 8–8–2007.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 8–8–2007ರ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರ ಸಂಸದೀಯ ವ್ಯವಹಾರಗಳ ಕಾರ್ಯದರ್ಶಿಗಳ ಹುದ್ದೆಯು ಸಂಪುಟ ದರ್ಜೆಯ ಸಚಿವರ ಸ್ಥಾನಮಾನಗಳನ್ನು ಹೊಂದಿದ್ದು, ಸಾರ್ವಜನಿಕ ಸೇವಾ ಹಿತದೃಷ್ಟಿಯಿಂದ ಸದರಿ ಸಂಸದೀಯ ವ್ಯವಹಾರಗಳ ಕಾರ್ಯದರ್ಶಿಗಳ ಆಪ್ತ ಶಾಖೆಯಲ್ಲಿರುವ ಒಂದು ಗ್ರೂಪ್–ಬಿ ವೃಂದದ ಹುದ್ದೆಯನ್ನು ಗ್ರೂಪ್–ಎ ವೃಂದಕ್ಕೆ ಏರಿಸಿ ಶ್ರೀ ಎಂ.ಟಿ. ಶ್ರೀನಿವಾಸನ್ ಇವರ ಪದೋನ್ನತಿ ನಂತರ ವಿಶೇಷ ಅಧಿಕಾರಿಯಾಗಿ ಅವರ ಆಪ್ತ ಶಾಖೆಯಲ್ಲಿಯೇ ಮುಂದುವರಿಸಬೇಕೆಂದು ಕೋರಿರುತ್ತಾರೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 93 ಸಅಸೇ 2007, ದಿನಾಂಕ 6–9–2007ರಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32ರಡಿಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಶಾಖಾಧಿಕಾರಿಗಳಿಗೆ ಅಧೀನ ಕಾರ್ಯದರ್ಶಿಯಾಗಿ ಸ್ವತಂತ್ರ ಪ್ರಭಾರದ ಮೇರೆಗೆ ಶ್ರೀ ಎಂ.ಟಿ. ಶ್ರೀನಿವಾಸನ್, ಮುಖ್ಯಮಂತ್ರಿಯವರ ಸಂಸದೀಯ ವ್ಯವಹಾರಗಳ ಕಾರ್ಯದರ್ಶಿಯವರ ವಿಶೇಷಾಧಿಕಾರಿ ಹಾಲಿ ಸದರಿಯವರು ಹೊಂದಿದ್ದ ಹುದ್ದೆಯನ್ನು ಅಧೀನ ಕಾರ್ಯದರ್ಶಿ ವೃಂದಕ್ಕೆ ಮೇಲ್ದರ್ಜೆಗೇರಿಸಿ ವಿಶೇಷಾಧಿಕಾರಿಯಾಗಿ ಮುಂದುವರಿಸಲಾಗಿದೆ. ಅದರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 331 ಸಅಸೇ 2007, ಬೆಂಗಳೂರು, ದಿನಾಂಕ 12ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಂ.ಟಿ. ಶ್ರೀನಿವಾಸನ್, ವಿಶೇಷಾಧಿಕಾರಿ, ಮುಖ್ಯ ಮಂತ್ರಿಯವರ ಸಂಸದೀಯ ವ್ಯವಹಾರಗಳ ಕಾರ್ಯದರ್ಶಿಯವರ ಆಪ್ತ ಶಾಖೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32ರಡಿಯಲ್ಲಿ ಅಧೀನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ 6–9–2007ರ ಅಧಿಸೂಚನೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ನೇಮಿಸಲಾಗಿದ್ದು, ಸದರಿಯವರು ಮುಖ್ಯಮಂತ್ರಿಯವರ ಸಂಸದೀಯ ವ್ಯವಹಾರಗಳ ಕಾರ್ಯದರ್ಶಿಯವರ ಆಪ್ತ ಶಾಖೆಯಲ್ಲಿ ಈ ಹುದ್ದೆಯಲ್ಲಿ ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಸಂಸದೀಯ ಕಾರ್ಯದರ್ಶಿಗಳ ಪದಾವಧಿಯವರೆಗೆ ಇದರಲ್ಲಿ ಯಾವುದು ಮೊದಲು

ಅಲ್ಲಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಸದರಿ ಆಪ್ತ ಶಾಖೆಯಲ್ಲಿನ ಗ್ರೂಪ್–ಬಿ ಒಂದು ಹುದ್ದೆಯನ್ನು ಗ್ರೂಪ್–ಎ ವೃಂದದ ವಿಶೇಷಾಧಿಕಾರಿ ಹುದ್ದೆಗೆ ತಾತ್ಕಾಲಿಕವಾಗಿ ಉನ್ನತೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1898 ವೆಚ್ಚ–5 2007, ದಿನಾಂಕ 27–9–2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಪಿ.ಆರ್. 1848 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–3).

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದವರ ವಿರುದ್ಧ ಸರ್ಕಾರದ ಪರವಾಗಿ ವ್ಯಾಜ್ಯವನ್ನು ನಿರ್ವಹಿಸಲು ಶ್ರೀ ಸಿ. ಜಗದೀಶ್, ವಕೀಲರು ಇವರನ್ನು ವಿಶೇಷ ನ್ಯಾಯವಾದಿಯಾಗಿ ನೇಮಿಸುವ ಬಗ್ಗೆ – ತಿದ್ದುಪಡಿ ಆದೇಶ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ 38 ಎಸ್‌ಎಡಿ 05, ದಿನಾಂಕ 2–7–07.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ:ಡಿಪಿಎನ್/ಎಡಿಎಂ/213/2005–06, ದಿನಾಂಕ 30–7–07

3) ಶ್ರೀ ಸಿ. ಜಗದೀಶ್, ವಕೀಲರು, ಇವರ ಪತ್ರ ದಿನಾಂಕ 11–9–07

**ಪ್ರಸ್ತಾವನೆ:**

ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದಿರುವವರ ವಿರುದ್ಧ ವಿವಿಧ ನ್ಯಾಯಾಲಯಗಳಲ್ಲಿ ಹೂಡಲಾದ ಪ್ರಕರಣಗಳಲ್ಲಿ ಸರ್ಕಾರದ ಪರವಾಗಿ ಪ್ರಕರಣವನ್ನು ತ್ವರಿತವಾಗಿ ಹಾಗೂ ಪರಿಣಾಮಕಾರಿಯಾಗಿ ಪ್ರತಿಪಾದಿಸಲು ಶ್ರೀ ಸಿ. ಜಗದೀಶ್, ಉಚ್ಚ ನ್ಯಾಯಾಲಯದ ವಕೀಲರು, ನಂ. 22, 2ನೇ ಮಹಡಿ, 1ನೇ ಮುಖ್ಯರಸ್ತೆ, ನೆಹರೂ ನಗರ, ರೆಡ್ಡಿ ಪೆಟ್ರೋಲ್ ಬಂಕ್ ಹತ್ತಿರ, ಶೇಷಾದ್ರಿಪುರಂ, ಬೆಂಗಳೂರು ಇವರನ್ನು ವಿಶೇಷ ನ್ಯಾಯವಾದಿಯಾಗಿ (Special counsel) ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶನಾಲಯ ಇವರು ಶ್ರೀ ಸಿ. ಜಗದೀಶ್, ವಕೀಲರು ಇವರನ್ನು ಬೆಂಗಳೂರಿನಲ್ಲಿ ಬಾಕಿ ಇರುವ ಪ್ರಕರಣಗಳನ್ನು ಅಥವಾ ರಾಜ್ಯದ ವಿವಿಧ ನ್ಯಾಯಾಲಯಗಳಲ್ಲಿ ಬಾಕಿ ಇರುವ ಪ್ರಕರಣಗಳನ್ನು ನಡೆಸಲು ನೇಮಿಸಲಾಗಿದೆಯೇ ಎಂಬ ಬಗ್ಗೆ ಸ್ಪಷ್ಟೀಕರಣ ನೀಡುವಂತೆ ಕೋರಿದ್ದಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಸಿ. ಜಗದೀಶ್, ವಕೀಲರು ತಾವು ಸುಳ್ಳು ಜಾತಿ ಪ್ರಮಾಣ ಪತ್ರಕ್ಕೆ ಸಂಬಂಧಿಸಿದಂತೆ ಮೇಲ್ಮನವಿ ಪ್ರಾಧಿಕಾರಿಗಳೂ ಸೇರಿದಂತೆ ಎಲ್ಲ ನ್ಯಾಯಾಲಯಗಳಲ್ಲಿ ಸರ್ಕಾರವನ್ನು ಪ್ರತಿನಿಧಿಸಲು ಅವಕಾಶವಾಗುವಂತೆ ದಿನಾಂಕ 2–7–2007ರಂದು ಹೊರಡಿಸಿದ ಆದೇಶಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಅಂತೆಯೇ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 108 ಎಸ್‌ಎಡಿ 2007, ಬೆಂಗಳೂರು, ದಿನಾಂಕ 3ನೇ ನವೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಕಇ 38 ಎಸ್‌ಎಡಿ 05, ದಿನಾಂಕ 2–7–2007ರಲ್ಲಿ ವಿವಿಧ ನ್ಯಾಯಾಲಯಗಳಲ್ಲಿ ಹೂಡಲಾದ ಸುಳ್ಳು ಜಾತಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಶ್ರೀ ಸಿ. ಜಗದೀಶ್, ವಕೀಲರು ಇವರನ್ನು ವಿಶೇಷ ನ್ಯಾಯವಾದಿಯಾಗಿ ನೇಮಕ ಮಾಡಿದ್ದನ್ನು ವಿಷದೀಕರಿಸಿ ಕರ್ನಾಟಕ ರಾಜ್ಯಾದ್ಯಂತ ಕರ್ನಾಟಕ ಆಡಳಿತ ನ್ಯಾಯಾಧೀಕರಣದಲ್ಲಿನ ಪ್ರಕರಣಗಳೂ ಸೇರಿ ವಿವಿಧ ನ್ಯಾಯಾಲಯಗಳಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರಕ್ಕೆ ಸಂಬಂಧಪಟ್ಟ ಮೊಕದ್ದಮೆಗಳನ್ನು ಸರ್ಕಾರದ ಪರವಾಗಿ ನಿರ್ವಹಿಸಲು ಹಾಗೂ ಕರ್ನಾಟಕ ರಾಜ್ಯ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಅಧಿನಿಯಮದ ಪ್ರಕಾರ ಮೇಲ್ಮನವಿ ಪ್ರಾಧಿಕಾರಿಗಳಾದ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಮುಂದೆ ಸಲ್ಲಿಸಲ್ಪಟ್ಟ ಸುಳ್ಳು ಜಾತಿ ಪ್ರಮಾಣ ಪತ್ರಗಳ ಮೇಲ್ಮನವಿ ಪ್ರಕರಣಗಳಲ್ಲಿಯೂ ಸಂಬಂಧಪಟ್ಟ ಜಿಲ್ಲಾ ಜಾತಿ ಪರಿಶೀಲನಾ ಸಮಿತಿ, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದ ಪರವಾಗಿ ಪ್ರಕರಣ ನಿರ್ವಹಿಸಲು ವಿಶೇಷ ನ್ಯಾಯವಾದಿಯಾಗಿ ನೇಮಿಸಿದೆ.

ಸುಳ್ಳು ಜಾತಿ ಪ್ರಮಾಣ ಪತ್ರಕ್ಕೆ ಸಂಬಂಧಪಟ್ಟ ವ್ಯಾಜ್ಯಗಳ ಬಗ್ಗೆ ವಿಶೇಷ ನ್ಯಾಯವಾದಿಗಳಿಂದ ಪತ್ರ ಬಂದಾಗ ಸಂಬಂಧಿಸಿದ ಇಲಾಖಾ ಮುಖ್ಯಸ್ಥರು ಇಲಾಖೆಯಲ್ಲಿನ ಆ ಪ್ರಕರಣವನ್ನು ನ್ಯಾಯಾಲಯದಲ್ಲಿ ನಿರ್ವಹಿಸಲು ನೇಮಕ

ಮಾಡಲ್ಪಟ್ಟ ವ್ಯಾಜ್ಯನಿರ್ವಹಣಾಧಿಕಾರಿ / ಪ್ರಕರಣಕ್ಕೆ ಸಂಬಂಧಿಸಿದಂತೆ ತಿಳಿದ ಅಧಿಕಾರಿ / ಶಪಥ ಪತ್ರ ಪ್ರಮಾಣೀಕರಿಸುವ ಅಧಿಕಾರಿಯನ್ನು ಸಂಬಂಧಿಸಿದ ಕಡತ / ಮಾಹಿತಿಯೊಡನೆ ವಿಶೇಷ ನ್ಯಾಯವಾದಿಯವರನ್ನು ಸಂಪರ್ಕಿಸಲು ಸೂಚಿಸಿ ಆಕ್ಷೇಪಣಾ ಹೇಳಿಕೆಯನ್ನು ತಯಾರಿಸಿ, ಪ್ರಮಾಣಿಸಲು ಅಗತ್ಯ ಕ್ರಮ ತೆಗೆದುಕೊಳ್ಳತಕ್ಕದ್ದೆಂದು ಸೂಚಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 2024

**ಕಂದಾಯ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ಆಗಮ ಶಿಕ್ಷಣ ಪರೀಕ್ಷಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ 31–3–2006 ಮತ್ತು 25–9–2007 ಸಂಖ್ಯೆ: ಎಡಿಎಂ 12 ಸಿಆರ್ 174/2001–02ರ ಧಾರ್ಮಿಕ ದತ್ತಿ ಆಯುಕ್ತರ ಪತ್ರಗಳು.

**2.** ದಿನಾಂಕ 1–10–2007 ಸಂಖ್ಯೆ: ಎಡಿಎಂ 13 ಸಿಆರ್ 481/2007–08ರ ಧಾರ್ಮಿಕ ದತ್ತಿ ಆಯುಕ್ತರ ಪತ್ರ.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರಗಳಲ್ಲಿ ಆಗಮ ಶಿಕ್ಷಣ ಪರೀಕ್ಷಾ ವಿಚಾರದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿದ್ದ ರಿಟ್ ಅರ್ಜಿ ಸಂಖ್ಯೆ: 44796/2003ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 3–2–2006ರಂದು ನೀಡಿರುವ ಅಂತಿಮ ತೀರ್ಪಿನಲ್ಲಿ ಆಗಮ ಶಿಕ್ಷಣ ಪರೀಕ್ಷಾ ಮತ್ತು ಸಲಹಾ ನಿಯಮಾವಳಿಗಳನ್ನು ತೀರ್ಪಿನ ಪ್ರತಿ ತಲುಪಿದ ದಿನಾಂಕದಿಂದ 6 ತಿಂಗಳುಗಳ ಒಳಗಾಗಿ ಜಾರಿಗೊಳಿಸುವಂತೆ ಸರ್ಕಾರಕ್ಕೆ ನಿರ್ದೇಶನ ನೀಡಿರುತ್ತದೆ. ಕರ್ನಾಟಕ ರಾಜ್ಯ ಆಗಮ ಶಿಕ್ಷಣ ಮತ್ತು ಪರೀಕ್ಷಾ ಸಲಹಾ ಸಮಿತಿ ರಚಿಸಿ ಆದೇಶ ಹೊರಡಿಸುವಂತೆ ಧಾರ್ಮಿಕ ದತ್ತಿ ಆಯುಕ್ತರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: 216 ಮುಸೇವಿ 2007, ಬೆಂಗಳೂರು, ದಿನಾಂಕ 6ನೇ ನವೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಆಗಮ ಶಿಕ್ಷಣ ಮತ್ತು ಪರೀಕ್ಷಾ ಸಮಿತಿಯನ್ನು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ಮೂರು ವರ್ಷಗಳ ಅವಧಿಗೆ ರಚಿಸಲಾಗಿದೆ:–

| | | |
|---|---|---|
| 1. | ಅಧ್ಯಕ್ಷರು | ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 2. | ಸದಸ್ಯ–ಕಾರ್ಯದರ್ಶಿ | ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 3. | ಸದಸ್ಯರು | ಪ್ರಾಚಾರ್ಯರು, ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು |
| 4. | ಸದಸ್ಯರು | ಶೈವಾಗಮ ಪಂಡಿತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 5. | ಸದಸ್ಯರು | ವೈಖಾನಾಸಾಗಮ ಪಂಡಿತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 6. | ಸದಸ್ಯರು | ಪಾಂಚರಾತ್ರಾಗಮ ಪಂಡಿತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು |
| 7. | ವಿಶೇಷ ಆಹ್ವಾನಿತರು | ಬೇರೆಯವರ ಅವಶ್ಯಕತೆ ಇದ್ದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ವಿಶೇಷ ಆಹ್ವಾನಿತರನ್ನು ಆಹ್ವಾನಿಸಬಹುದು. |

ಸದರಿ ಸಮಿತಿಯು ಆಗಮ ಸಲಹಾ ಮಂಡಳಿಯ ಸಲಹೆಗಳನ್ನು ಹಾಗೂ ವಿದ್ಯಾರ್ಥಿಗಳ ಆಗಮ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸುವ ಹಿನ್ನೆಲೆಯಲ್ಲಿ ಪಠ್ಯ ಕ್ರಮಗಳನ್ನು ರಚಿಸುವುದು, ಆಗಮ ಬೋಧನಾ ವಿಧಾನ, ಆಗಮಿಕ ಶಿಕ್ಷಣ ನೀಡುವ ಬಗ್ಗೆ ಮೇಲುಸ್ತುವಾರಿಯನ್ನು ನೋಡಿಕೊಳ್ಳುವುದು, ಪರೀಕ್ಷೆಗಳ ಅವಶ್ಯಕತೆ ತಕ್ಕಂತೆ ಪ್ರಶ್ನೆ ಪತ್ರಿಕೆಗಳನ್ನು ಸಿದ್ಧಪಡಿಸುವುದು, ಪರೀಕ್ಷೆಗಳನ್ನು ವ್ಯವಸ್ಥಿತವಾಗಿ ನಡೆಸುವುದು, ಉತ್ತಮ ರೀತಿಯಲ್ಲಿ ಮೌಲ್ಯಮಾಪನ ಮಾಡುವುದು, ಇಡೀ ಪರೀಕ್ಷಾ ಪ್ರಕ್ರಿಯೆಯಲ್ಲಿ ಯಾವುದೇ ರೀತಿಯ ಲೋಪದೋಷಗಳು / ನ್ಯೂನತೆಗಳು / ದೂರುಗಳು ಬಾರದಂತೆ ಕಟ್ಟುನಿಟ್ಟಾಗಿ ಎಚ್ಚರವಹಿಸುವುದು, ಯಾವುದೇ ರೀತಿಯಲ್ಲೂ ಪರೀಕ್ಷಾ ಪ್ರಕ್ರಿಯೆಗಳು ಬಹಿರಂಗವಾಗದಂತೆ ಗೌಪ್ಯವಾಗಿ ಕರ್ತವ್ಯ ನಿಷ್ಠೆ (integrity) ಇರುವಂತಹ ಸಿಬ್ಬಂದಿಯವರನ್ನು ಮಾತ್ರ ಪರೀಕ್ಷಾ ಪ್ರಕ್ರಿಯೆಗೆ ನೇಮಿಸಿಕೊಂಡು ಇದರ ನಿಯಮಾವಳಿಗಳ ಅಡಿಯಲ್ಲಿ ಪರೀಕ್ಷೆಗಳನ್ನು ನಡೆಸುವುದು; ಫಲಿತಾಂಶವನ್ನು ಪ್ರಕಟಿಸುವುದು ಈ ಸಮಿತಿಯ ಮುಖ್ಯ ಜವಾಬ್ದಾರಿಗಳಾಗಿರುತ್ತವೆ.

ಪರೀಕ್ಷಾ ಪ್ರಕ್ರಿಯೆಗಳಲ್ಲಿ ನಿಯಮಾನುಸಾರ ಸಂಭಾವನೆಯನ್ನು ನೀಡಲು ಹಾಗೂ ಎಲ್ಲಾ ಪೂರ್ವ ಸಿದ್ಧತೆಗಳನ್ನು ಮಾಡಿಕೊಳ್ಳಲು ಈ ಸಮಿತಿಯು ಕಾರ್ಯನಿರ್ವಹಿಸತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್.ಎಸ್. ಶ್ರೀಕಂಠಬಾಬು**

ಪಿ.ಆರ್. 2021

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

**ಆರ್ಥಿಕ ಸಚಿವಾಲಯ**

**ವಿಷಯ:** ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವ ಯೋಜನೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆಇ 165 ಸಿಎಸ್ಓ 94, ದಿನಾಂಕ 12–12–94

**2.** ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 199 ಸಿಎಸ್ಎಲ್–2004, ದಿನಾಂಕ 7–9–2004.

**3.** ಸರ್ಕಾರದ ಆದೇಶ ಸಂಖ್ಯೆ: ಆಇ 388 ಸಿಎಸ್ಎಲ್ 2005, ದಿನಾಂಕ 30–8–2005.

**4.** ಸರ್ಕಾರಿ ಆದೇಶ ಸಂಖ್ಯೆ: ಆಇ 419 ಸಿಎಸ್ಎಲ್ 2006, ದಿನಾಂಕ 7–3–2007

**5.** ವಾಣಿಜ್ಯ ತೆರಿಗೆ ಆಯುಕ್ತರ ಪತ್ರ ಸಂಖ್ಯೆ: ಡಿಸಿಸಿಟಿ/ಹೆಚ್‌ಕ್ಯೂ–1/ಎಎಸ್‌ಡಬ್ಲ್ಯೂ/ಆರ್‌ಇಡಬ್ಲ್ಯೂ/ ಸಿಆರ್–06/95–96, ದಿನಾಂಕ 3–10–07.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶ ದಿನಾಂಕ 12–12–94ರಲ್ಲಿ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡಿದವರಿಗೆ ಪುರಸ್ಕಾರ ನೀಡುವುದಕ್ಕೆ ಸಂಬಂಧಿಸಿದಂತೆ, ಚಾಲ್ತಿಯಲ್ಲಿದ್ದ ಯೋಜನೆಯನ್ನು ಕೆಲವೊಂದು ಷರತ್ತುಗೊಳಪಡಿಸಿ ಮುಂದುವರಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಆದೇಶ ದಿನಾಂಕ 7–9–2004ರಲ್ಲಿ ಈ ಯೋಜನೆಯನ್ನು ಮುಂದುವರಿಸುತ್ತಾ ದಿನಾಂಕ 12–12–94ರ ಆದೇಶದಲ್ಲಿ ನಮೂದಿಸಿರುವ ವಿಧಾನ ಮತ್ತು ಷರತ್ತುಗಳಿಗೊಳಪಟ್ಟ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವುದಕ್ಕೆ ದಿನಾಂಕ 1–4–2004 ರಿಂದ 31–3–2005ರವರೆಗೆ ಅವಧಿ ವಿಸ್ತರಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಆದೇಶ ದಿನಾಂಕ 30–8–2005ರಲ್ಲಿ ಈ ಯೋಜನೆಯನ್ನು ದಿನಾಂಕ 1–4–2005 ರಿಂದ ದಿನಾಂಕ 31–3–2006ರವರೆಗೆ ವಿಸ್ತರಿಸಿ ಆದೇಶ ಹೊರಡಿಸಿದೆ.

ಮೇಲೆ (4)ರಲ್ಲಿ ಓದಲಾದ ಆದೇಶ ದಿನಾಂಕ 7–3–2007ರಲ್ಲಿ ಈ ಯೋಜನೆಯನ್ನು ದಿನಾಂಕ 1–4–2006 ರಿಂದ 31–3–2007ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರು ಪ್ರಸ್ತಾವನೆ ಸಲ್ಲಿಸಿ ಮೌಲ್ಯವರ್ಧಿತ ತೆರಿಗೆ ಕಾಯ್ದೆ ಅಡಿಯಲ್ಲಿ 2006–07ನೇ ಸಾಲಿನಲ್ಲಿ ತೆರಿಗೆ ತಪ್ಪಿಸುವವರ ಬಗ್ಗೆ ಮಾಹಿತಿ ನೀಡಿದವರಿಗೆ ನಗದು ಪುರಸ್ಕಾರಗಳನ್ನು ವಿತರಿಸಲಾಗಿದೆ ಹಾಗೂ ಈ ಯೋಜನೆಯು ದಿನಾಂಕ 31–3–2007ರಂದು ಮುಕ್ತಾಯವಾಗಿದ್ದು, ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡಿದವರನ್ನು ಪ್ರೋತ್ಸಾಹಿಸುವ ಯೋಜನೆಯನ್ನು ಮುಂದುವರಿಸುವುದು ಅಗತ್ಯವಾಗಿರುತ್ತದೆ ಮತ್ತು ಅದರಂತೆ ದಿನಾಂಕ 1–4–2007 ರಿಂದ 31–3–2008ರವರೆಗೆ ವಿಸ್ತರಿಸುವ ಆದೇಶವನ್ನು ಹೊರಡಿಸುವ ಕುರಿತು ಶಿಫಾರಸ್ಸು ಮಾಡಲಾಗಿದೆ.

ವಾಣಿಜ್ಯ ತೆರಿಗೆ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 419 ಸಿಎಸ್ಎಲ್ 2007, ಬೆಂಗಳೂರು, ದಿನಾಂಕ 16ನೇ ನವೆಂಬರ್, 2007**

ಸರ್ಕಾರಿ ಆದೇಶ ಸಂಖ್ಯೆ: ಆಇ 165 ಸಿಎಸ್ಓ 94, ದಿನಾಂಕ 12–12–94ರಲ್ಲಿ ನಮೂದಿಸಲಾದ ವಿಧಾನ ಮತ್ತು ಷರತ್ತುಗಳಿಗೊಳಪಟ್ಟಂತೆ ತೆರಿಗೆ ತಪ್ಪಿಸುವವರ ಬಗ್ಗೆ ಸುಳಿವು ನೀಡುವವರಿಗೆ ಪುರಸ್ಕಾರ ನೀಡುವುದಕ್ಕೆ ಸಂಬಂಧಪಟ್ಟ ಯೋಜನೆಯನ್ನು ದಿನಾಂಕ 1–4–2007 ರಿಂದ 31–3–2008ರವರೆಗೆ ವಿಸ್ತರಿಸಿ ಆದೇಶಿಸಿದೆ.

ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಇಟಗಿ**

ಪಿ.ಆರ್. 2025

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾ.ತೆ.1).

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಆಕುಕ 239 ಪಿಐಎಂ 2007, ಬೆಂಗಳೂರು, ದಿನಾಂಕ 23ನೇ ಅಕ್ಟೋಬರ್, 2007**

ಸರ್ಕಾರಿ ಆದೇಶ ಸಂಖ್ಯೆ: ಆಕುಕ 239 ಪಿಐಎಂ 2007, ದಿನಾಂಕ 9–10–2007ರ ಆದೇಶದ ನಂತರ ಬರುವ "ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ" ಈ ವಾಕ್ಯವನ್ನು "ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 2031

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ಸಹಕಾರ ಸಚಿವಾಲಯ**

**ವಿಷಯ:** ಕೃಷಿ ಮಾರಾಟ ಇಲಾಖೆಯ ಯೋಜನಾ ವಿಭಾಗದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಮಾತೂ/252/ಮಾಇಸೇ/1993, ದಿನಾಂಕ 23–6–2000
**2.** ಸರ್ಕಾರದ ಆದೇಶ ಸಂಖ್ಯೆ: ಸಇ/298/ಮಾಇಸೇ/2006, ದಿನಾಂಕ 30–10–2006
**3.** ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ; ಕೃಮಾಇ/126/ಸಿಬ್ಬಂದಿ–1(ಸಿ)/2005, ದಿನಾಂಕ 6–8–2007

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶದಲ್ಲಿ ಕೃಷಿ ಮಾರಾಟ ಇಲಾಖೆಯ ಯೋಜನಾ ವಿಭಾಗಕ್ಕಾಗಿ ಒಟ್ಟು 11 ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ತದನಂತರ ಈ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ. ಅಂತಿಮವಾಗಿ ಮೇಲೆ ಓದಲಾದ (2)ರಲ್ಲಿನ ದಿನಾಂಕ
30–10–2006ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ 30–6–2007ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರೀ ಹುದ್ದೆಗಳನ್ನು ದಿನಾಂಕ 1–7–2007ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರಿಸಲು ಕೃಷಿ ಮಾರಾಟ ಇಲಾಖೆಯ ಹೆಚ್ಚುವರಿ ನಿರ್ದೇಶಕರು, ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ/172/ಮಾಇಸೇ/2007, ಬೆಂಗಳೂರು, ದಿನಾಂಕ 2ನೇ ನವೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕೃಷಿ ಮಾರಾಟ ಇಲಾಖೆಯ ಯೋಜನಾ ವಿಭಾಗದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ 1–7–2007ರಿಂದ 30–6–2008ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

| ಕ್ರ. ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಂಟಿ ನಿರ್ದೇಶಕರು | 01 |
| 2 | ಅಧೀಕ್ಷಕರು | 01 |
| 3 | ಶೀಘ್ರಲಿಪಿಗಾರರು | 01 |
| 4 | ಪ್ರಥಮ ದರ್ಜೆ ಸಹಾಯಕರು | 02 |
| 5 | ದ್ವಿತೀಯ ದರ್ಜೆ ಸಹಾಯಕರು | 02 |
| 6 | ಬೆರಳಚ್ಚುಗಾರರು | 01 |
| 7 | ವಾಹನ ಚಾಲಕರು | 01 |
| 8 | ಸಿಪಾಯಿ | 02 |
| | **ಒಟ್ಟು** | **11** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: "3475–ಇತರೆ ಸಾಮಾನ್ಯ ಆರ್ಥಿಕ ಸೇವೆಗಳು 107–ಮಾರುಕಟ್ಟೆ ಕ್ರಮ ಪಡಿಸುವಿಕೆ–02 ಮಾರುಕಟ್ಟೆ ಸಮಿತಿಗಳು (ಯೋಜನೇತರ)"ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ/59/ಆಂಆಸ/2007, ದಿನಾಂಕ 15–10–2007ರಲ್ಲಿ ನೀಡಲಾದ ಸಹಮತಿಯಂತೆ ಮತ್ತು ಸರ್ಕಾರದ ಆದೇಶ ಸಂಖ್ಯೆ: 01/ಟಿಎಫ್‌ಪಿ/1996,

ದಿನಾಂಕ 10–7–1996ರಲ್ಲಿ ಆರ್ಥಿಕ ಇಲಾಖೆಯು ಇಲಾಖಾ ಕಾರ್ಯದರ್ಶಿಗಳಿಗೆ ನೀಡಲಾಗಿರುವ ಆರ್ಥಿಕ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಕೆ. ವಾಸುದೇವಮೂರ್ತಿ**

ಪಿ.ಆರ್. 2034

ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಹಾಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯಿತಿಯಿಂದ ಪ್ರತ್ಯೇಕಿಸಿ ನೂತನವಾಗಿ ಸೃಜನೆಗೊಂಡ ರಾಮನಗರ ಜಿಲ್ಲಾ ಪಂಚಾಯತ್ ಕಛೇರಿಗೆ ಹುದ್ದೆಗಳು ಹಾಗೂ ಸದರಿ ಹುದ್ದೆಗಳಲ್ಲಿನ ಅಧಿಕಾರಿ ಹಾಗೂ ಸಿಬ್ಬಂದಿಗಳ ಸ್ಥಳಾಂತರ ಕುರಿತಂತೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಆರ್‌ಡಿ/27/ಭೂದಾಮು/2006 (ಭಾಗ–3), ದಿನಾಂಕ 3–8–2007.
2. ಸರ್ಕಾರದ ತಿದ್ದುಪಡಿ ಸಂಖ್ಯೆ: ಕಂಇ/ಭೂದಾಮು/2006 (ಭಾಗ 3), ದಿನಾಂಕ 17–8–2007
3. ಅಧಿಸೂಚನೆ ಸಂಖ್ಯೆ: ಗ್ರಾಅಪ/169/ಜಿಪಸ/2007, ದಿನಾಂಕ 21–8–2007
4. ಅಧಿಸೂಚನೆ ಸಂಖ್ಯೆ: ಗ್ರಾಅಪ/170/ಜಿಪಸ/2007, ದಿನಾಂಕ 21–8–2007

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಕಂದಾಯ ಇಲಾಖೆಯು ಹೊರಡಿಸಿರುವ ಅಧಿಸೂಚನೆ ಸಂ. ಆರ್‌ಡಿ 27 ಭೂದಾಮು 2007 (ಭಾಗ–3) ದಿನಾಂಕ 3–8–2007ರ ಪ್ರಕಾರ ಕೋಲಾರ ಜಿಲ್ಲೆಯ ವ್ಯಾಪ್ತಿಯಲ್ಲಿನ 11 ತಾಲ್ಲೂಕುಗಳ ಪೈಕಿ 6 ತಾಲ್ಲೂಕುಗಳನ್ನು ಅಂದರೆ ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ, ಬಾಗೇಪಲ್ಲಿ, ಗುಡಿಬಂಡೆ, ಗೌರಿಬಿದನೂರುಗಳನ್ನು ಪ್ರತ್ಯೇಕಿಸಿ ಚಿಕ್ಕಬಳ್ಳಾಪುರ ಪಟ್ಟಣವನ್ನು ಕೇಂದ್ರ ಸ್ಥಾನವಾಗಿ ಹೆಸರಿಸಿ ಚಿಕ್ಕಬಳ್ಳಾಪುರ ಜಿಲ್ಲೆಯನ್ನು ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿನ 8 ತಾಲ್ಲೂಕುಗಳ ಪೈಕಿ 4 ತಾಲ್ಲೂಕುಗಳನ್ನು ಅಂದರೆ ರಾಮನಗರ, ಮಾಗಡಿ, ಕನಕಪುರ, ಚನ್ನಪಟ್ಟಣಗಳನ್ನು ಪ್ರತ್ಯೇಕಿಸಿ ರಾಮನಗರ ಪಟ್ಟಣವನ್ನು ಕೇಂದ್ರ ಸ್ಥಾನವನ್ನಾಗಿ ಹೆಸರಿಸಿ ರಾಮನಗರ ಜಿಲ್ಲೆಯನ್ನು ರಚಿಸಿ ದಿನಾಂಕ 10–9–2007ರಿಂದ ಅಸ್ತಿತ್ವಕ್ಕೆ ಬರುವಂತೆ ಆದೇಶಿಸಲಾಗಿತ್ತು. ಇದರ ಮುಂದುವರಿಕೆಯಲ್ಲಿ ಮೇಲೆ (2)ರಲ್ಲಿ ಓದಲಾದ ದಿನಾಂಕ 17–8–2007ರ ತಿದ್ದುಪಡಿ ಆದೇಶದಲ್ಲಿ ರಾಮನಗರ ಹಾಗೂ ಚಿಕ್ಕಬಳ್ಳಾಪುರ ನೂತನ ಜಿಲ್ಲೆಗಳು ದಿನಾಂಕ 23–8–2007ರಿಂದಲೇ ಅಸ್ತಿತ್ವಕ್ಕೆ ಬರಲಿದೆ ಎಂದು ಆದೇಶಿಸಿದೆ.

ಇದಕ್ಕನುಸಾರವಾಗಿ ಮೇಲೆ (3) ಮತ್ತು (4)ರಲ್ಲಿ ಓದಲಾದ ದಿನಾಂಕ 21–8–2007 ಅಧಿಸೂಚನೆಗಳಲ್ಲಿ ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ 1993 ರಡಿಯಲ್ಲಿ ನೂತನ ಜಿಲ್ಲೆಗಳಾದ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಜಿಲ್ಲಾ ಪಂಚಾಯಿತಿಗಳನ್ನು ದಿನಾಂಕ 23–8–2007ರಿಂದ ಅನ್ವಯಿಸುವಂತೆ ಸೃಜಿಸಿ ಆದೇಶಿಸಲಾಗಿದೆ.

ನೂತನ ರಾಮನಗರ ಜಿಲ್ಲಾ ಪಂಚಾಯಿತಿ ಕಛೇರಿಗೆ ಹಾಲಿ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯಿತಿಯಿಂದ ನಿಗದಿತ ಸಂಖ್ಯೆಯ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದ ಹುದ್ದೆಗಳೊಂದಿಗೆ ಸದರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ಹಾಗೂ ನೌಕರರನ್ನು ಸ್ಥಳಾಂತರಿಸುವುದು ಅಗತ್ಯವಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 179 ಕೆಎಸ್‌ಎಸ್ 2007(1), ಬೆಂಗಳೂರು, ದಿನಾಂಕ 22ನೇ ಆಗಸ್ಟ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಅನುಬಂಧ–1ರ ಕಾಲಂ (4)ರಲ್ಲಿ ತೋರಿಸಿರುವ ಹಿಂದಿನ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯಿತಿ ಕಛೇರಿಯ ವೃಂದ ಬಲದಲ್ಲಿ ಹೊಸದಾಗಿ ಸೃಜಿಸಲ್ಪಟ್ಟ ರಾಮನಗರ ಜಿಲ್ಲೆಯ ಜಿಲ್ಲಾ ಪಂಚಾಯತ್ ಕಛೇರಿಯ ವೃಂದಗಳಿಗೆ ಕಾಲಂ (5)ರಲ್ಲಿ ಸೂಚಿಸಿರುವಂತೆ ಹುದ್ದೆಗಳನ್ನು ವರ್ಗಾಯಿಸಿ ಆದೇಶಿಸಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸಂಬಂಧಿಸಿದಂತೆ ಕಾಲಂ (5)ರಲ್ಲಿ ತೋರಿಸಿರುವ ಹುದ್ದೆಗಳನ್ನು ರದ್ದು ಮಾಡಲ್ಪಟ್ಟಿದೆ.

ಅನುಬಂಧ–1ರ ಕಾಲಂ (5)ರಲ್ಲಿನ ಅಧಿಕಾರಿ ಹಾಗೂ ನೌಕರರ ಹುದ್ದೆಗಳಿಗೆದುರಾಗಿ, ಹಿಂದಿನ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾ ಪಂಚಾಯಿತಿ ಕಛೇರಿಯಲ್ಲಿ ಸದರಿ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅನುಬಂಧ–2ರಲ್ಲಿ ಪಟ್ಟಿ ಮಾಡಿರುವ ಅಧಿಕಾರಿಗಳು ಹಾಗೂ ನೌಕರರನ್ನು ರಾಮನಗರ ಜಿಲ್ಲಾ ಪಂಚಾಯತಿಗೆ ವರ್ಗಾಯಿಸುವ ಮೂಲಕ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಯು. ಶಿವಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ–1**

**ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲಾ ಪಂಚಾಯತಿ ಕಛೇರಿಗಳ ವೃಂದ ಬಲ**

| ಕ್ರ.ಸಂ. | ಹುದ್ದೆಯ ಹೆಸರು | ವೇತನ ಶ್ರೇಣಿ | ಬೆಂಗಳೂರು (ಗ್ರಾ) ಜಿ.ಪಂ.ನಲ್ಲಿ ಮಂಜೂರಾಗಿರುವ ವೃಂದ ಬಲ | ಬೆಂಗಳೂರು (ಗ್ರಾ) ಜಿ.ಪಂ. ನಿಂದ ವರ್ಗಾಯಿಸಿದ ಹುದ್ದೆಗಳ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು | ಐಎಎಸ್ ವೃಂದ | 1 | – |
| 2. | ಉಪ ಕಾರ್ಯದರ್ಶಿ–1 | 20025–28275 | 1 | 1 |
| 3. | ಉಪಕಾರ್ಯದರ್ಶಿ–2 | 20025–28275 | 1 | – |
| 4. | ಮುಖ್ಯ ಲೆಕ್ಕಾಧಿಕಾರಿಗಳು | 20025–28275 | 1 | – |
| 5. | ಮುಖ್ಯ ಯೋಜನಾಧಿಕಾರಿ | 20025–28275 | 1 | 1 |
| 6. | ಸಹಾಯಕ ಕಾರ್ಯದರ್ಶಿ (ಆಡಳಿತ) | 14050–25050 | 1 | 1 |
| 7. | ಸಹಾಯಕ ಕಾರ್ಯದರ್ಶಿ (ಅಭಿವೃದ್ಧಿ) | 14050–25050 | 1 | – |
| 8. | ಲೆಕ್ಕಾಧಿಕಾರಿ | 14050–25050 | 1 | – |
| 9. | ಯೋಜನಾ ನಿರ್ಣಾಯಕ ಮತ್ತು ಮೌಲ್ಯಮಾಪನ ಅಧಿಕಾರಿ | 11400–21600 | 1 | – |
| 10. | ಮಾನವ ಶಕ್ತಿ ಮತ್ತು ಸಾಲ ಯೋಜನಾಧಿಕಾರಿ | 11400–21600 | 1 | – |
| 11. | ಸಾಂಖ್ಯಿಕ ಅಧಿಕಾರಿ | 11400–21600 | 1 | – |
| 12. | I ಅಧೀಕ್ಷಕರು | 10000–18150 | 04 | 2 |
| 13. | II ಲೆಕ್ಕಾಧೀಕ್ಷಕರು | 10800–20025 | 05 | 3 |
| 14. | ಸಹಾಯಕ ಸಾಂಖ್ಯಿಕ ಅಧಿಕಾರಿ | 8825–16000 | 1 | – |
| 15. | ಪ್ರಥಮ ದರ್ಜೆ ಸಹಾಯಕರು | 7275–13350 | 21 | 10 |
| 16. | ಶೀಘ್ರಲಿಪಿಗಾರರು | 7275–13350 | 9 | 4 |
| 17. | ದ್ವಿತೀಯ ದರ್ಜೆ ಸಹಾಯಕರು | 5800–10500 | 14 | 7 |
| 18. | ಬೆರಳಚ್ಚುಗಾರರು | 5800–10500 | 8 | 4 |
| 19. | ರೆಕಾರ್ಡ್ ಕೀಪರ್ | 5800–10500 | 1 | – |
| 20. | ವಾಹನ ಚಾಲಕರು | 5800–10500 | 5 | 2 |
| 21. | ಗ್ರೂಪ್ 'ಡಿ' | 4800–7275 | 15 | 7 |
| 22. | ಬೈಂಡರ್ಸ್ | 4800–7275 | 1 | – |
| | **ಒಟ್ಟು** | | **95** | **42** |

**ಎಸ್.ಯು. ಶಿವಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಅನುಬಂಧ–2**

**ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯಿತಿಯಿಂದ ರಾಮನಗರ ಜಿಲ್ಲಾ ಪಂಚಾಯಿತಿಗೆ ವರ್ಗಾವಣೆಗೊಳ್ಳುವ ಅಧಿಕಾರಿ/ನೌಕರರ ಪಟ್ಟಿ**

| ಕ್ರ. ಸಂ. | ಹೆಸರು ಮತ್ತು ಪದನಾಮ | ವೇತನ ಶ್ರೇಣಿ |
|---|---|---|
| 1. | ಶ್ರೀ ಕೆ. ಯಾಲಕ್ಕಿಗೌಡ ಉಪ ಕಾರ್ಯದರ್ಶಿ | 20025–28275 |
| 2. | ಶ್ರೀ ಕೆ.ಜಿ. ರಾಮಪ್ರಕಾಶ್, ಮುಖ್ಯ ಯೋಜನಾಧಿಕಾರಿಗಳು | 20025–28275 |
| 3. | –ಖಾಲಿ– ಸಹಾಯಕ ಕಾರ್ಯದರ್ಶಿ | 14050–25050 |
| 4. | ಶ್ರೀಮತಿ ಕೆ. ಶಕುಂತಲಮ್ಮ ಅಧೀಕ್ಷಕರು | 10000–18150 |

| 5. | ಶ್ರೀ ಎಂ.ಎಂ. ಸುಬ್ಬಯ್ಯ, ಅಧೀಕ್ಷಕರು | 10000–18150 |
|---|---|---|
| 6. | ಶ್ರೀ ಜಗದೀಶ್, ಲೆಕ್ಕಾಧೀಕ್ಷಕರು | 10800–20025 |
| 7. | –ಖಾಲಿ–, ಲೆಕ್ಕಾಧೀಕ್ಷಕರು | 10800–20025 |
| 8. | –ಖಾಲಿ– ಲೆಕ್ಕಾಧೀಕ್ಷಕರು | 10800–20025 |
| 9. | ಶ್ರೀ ಸಾವಂದಪ್ಪ, ಪ್ರಥಮ ದರ್ಜೆ ಸಹಾಯಕ | 7275–13350 |
| 10. | ಶ್ರೀ ಬಿ.ಪಿ. ಚಿಕ್ಕರೇವಣ್ಣ, ಪ್ರಥಮ ದರ್ಜೆ ಸಹಾಯಕ | 7275–13350 |
| 11. | ಶ್ರೀಮತಿ ಇಂದುದೇವಿ, ಪ್ರಥಮ ದರ್ಜೆ ಸಹಾಯಕ | 7275–13350 |
| 12. | ಶ್ರೀ ಎಂ. ಶಿವಪ್ರಕಾಶ್, ಪ್ರಥಮ ದರ್ಜೆ ಸಹಾಯಕ | 7275–13350 |
| 13. | ಶ್ರೀ ಎಸ್. ಕೃಷ್ಣಪ್ಪ, ಪ್ರಥಮ ದರ್ಜೆ ಸಹಾಯಕ | 7275–13350 |
| 14. | ಶ್ರೀ ಬಿ.ಎಸ್. ಸತೀಶ್, ಪ್ರಥಮ ದರ್ಜೆ ಸಹಾಯಕ | 7275–13350 |
| 15. | –ಖಾಲಿ– ಪ್ರಥಮ ದರ್ಜೆ ಸಹಾಯಕ | 7275–13350 |
| 16. | –ಖಾಲಿ– ಪ್ರಥಮ ದರ್ಜೆ ಸಹಾಯಕ | 7275–13350 |
| 17. | –ಖಾಲಿ– ಪ್ರಥಮ ದರ್ಜೆ ಸಹಾಯಕ | 7275–13350 |
| 18. | –ಖಾಲಿ– ಪ್ರಥಮ ದರ್ಜೆ ಸಹಾಯಕ | 7275–13350 |
| 19. | ಶ್ರೀಮತಿ ಕೆ. ಗಾಯಿತ್ರಿ ಶೀಘ್ರಲಿಪಿಗಾರರು | 7275–13350 |
| 20. | ಶ್ರೀಮತಿ ಎಲ್.ಹೆಚ್. ಸುಜಾತ ಶೀಘ್ರಲಿಪಿಗಾರರು | 7275–13350 |
| 21. | ಶ್ರೀ ಕೆ. ತಿಮ್ಮಪ್ಪ, ಶೀಘ್ರಲಿಪಿಗಾರರು | 7275–13350 |
| 22. | –ಖಾಲಿ– ಶೀಘ್ರಲಿಪಿಗಾರರು | 7275–13350 |
| 23. | –ಖಾಲಿ– ಶೀಘ್ರಲಿಪಿಗಾರರು | 7275–13350 |
| 24. | ಶ್ರೀ ಆರ್. ವಿಶ್ವನಾಥ್ ದ್ವಿತೀಯ ದರ್ಜೆ ಸಹಾಯಕರು | 5800–10500 |
| 25. | ಶ್ರೀ ಹೆಚ್.ಬಿ. ನಾಯಕ್, ದ್ವಿತೀಯ ದರ್ಜೆ ಸಹಾಯಕರು | 5800–10500 |
| 26. | ಶ್ರೀಮತಿ ಸಿ.ಎಸ್. ಗೀತಾ, ದ್ವಿತೀಯ ದರ್ಜೆ ಸಹಾಯಕರು | 5800–10500 |
| 27. | ಶ್ರೀಮತಿ ಕುಮಾರಿ ದ್ವಿತೀಯ ದರ್ಜೆ ಸಹಾಯಕರು | 5800–10500 |
| 28. | ಶ್ರೀಮತಿ ಅರುಣ, ದ್ವಿತೀಯ ದರ್ಜೆ ಸಹಾಯಕರು | 5800–10500 |
| 29. | –ಖಾಲಿ– ದ್ವಿತೀಯ ದರ್ಜೆ ಸಹಾಯಕರು | 5800–10500 |
| 30. | –ಖಾಲಿ– ದ್ವಿತೀಯ ದರ್ಜೆ ಸಹಾಯಕರು | 5800–10500 |
| 31. | ಶ್ರೀ ವಿ. ರಾಮಕೃಷ್ಣಮೂರ್ತಿ, ಬೆರಳಚ್ಚುಗಾರರು | 5800–10500 |
| 32. | ಶ್ರೀ ಧರಣೇಶ್ವರ್, ಬೆರಳಚ್ಚುಗಾರರು | 5800–10500 |
| 33. | –ಖಾಲಿ– ಬೆರಳಚ್ಚುಗಾರರು | 5800–10500 |
| 34. | –ಖಾಲಿ– ಬೆರಳಚ್ಚುಗಾರರು | 5800–10500 |
| 35. | –ಖಾಲಿ– ವಾಹನ ಚಾಲಕರು | 5800–10500 |
| 36. | ಶ್ರೀ ಶಿವಲಿಂಗಯ್ಯ, ಗ್ರೂಪ್–ಡಿ | 4800–7275 |
| 37. | ಶ್ರೀ ಕೃಷ್ಣನಾಯಕ್ ಗ್ರೂಪ್–ಡಿ | 4800–7275 |
| 38. | –ಖಾಲಿ– ಗ್ರೂಪ್–ಡಿ | 4800–7275 |
| 39. | –ಖಾಲಿ– ಗ್ರೂಪ್–ಡಿ | 4800–7275 |
| 40. | –ಖಾಲಿ– ಗ್ರೂಪ್–ಡಿ | 4800–7275 |
| 41. | –ಖಾಲಿ– ಗ್ರೂಪ್–ಡಿ | 4800–7275 |
| 42. | –ಖಾಲಿ– ಗ್ರೂಪ್–ಡಿ | 4800–7275 |

**ಎಸ್.ಯು. ಶಿವಪ್ಪ**

ಪಿ.ಆರ್. 1577

ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಕಾರ್ಮಿಕ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸ್ಥಾಪನೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಾಇ 138 ಇಟಿಐ 2007, ದಿನಾಂಕ 13–8–2007

2. ಸರ್ಕಾರದ ಆದೇಶ ಸಂಖ್ಯೆ: ಕಾಇ 138 ಇಟಿಐ 2007, ದಿನಾಂಕ 18–8–2007

3. ಸರ್ಕಾರದ ಆದೇಶ ಸಂಖ್ಯೆ: ಕಾಇ 138 ಇಟಿಐ 2007, ದಿನಾಂಕ 3–9–2007

4. ಪತ್ರ ಸಂಖ್ಯೆ: ಉತನಿ/ತ/ಯೋ–01/ವಿವ–06/2007–08, ದಿನಾಂಕ 4–9–2007

5. ಸರ್ಕಾರದ ಆದೇಶ ಸಂಖ್ಯೆ: ಕಾಇ 138 ಇಟಿಐ 2007 (ಭಾಗ) ದಿನಾಂಕ 29–10–2007

**ಪ್ರಸ್ತಾವನೆ:**

ರಾಜ್ಯದ 10 ತಾಲ್ಲೂಕುಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು 2007–08ನೇ ಸಾಲಿನ ಆಯವ್ಯಯದಲ್ಲಿ ರೂ. 300.00 ಲಕ್ಷಗಳನ್ನು ಒದಗಿಸಲಾಗಿತ್ತು.

ಮೇಲೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ 2007–08ನೇ ಸಾಲಿನಲ್ಲಿ ರಾಜ್ಯದ ಮೊಸಳೇಹೊಸಹಳ್ಳಿ, ಕುಣಿಗಲ್, ಉದಯಪುರ, ಸಕಲೇಶಪುರ, ಸಾಲಿಗ್ರಾಮ, ಸಕ್ಕರಾಯಪಟ್ಟಣ, ಗೋಕಾಕ, ಆಲೂರು, ಮಾಗಡಿ, ಶಿಡ್ಲಘಟ್ಟ, ಕಿತ್ತೂರು, ನವಲಗುಂದ, ಜಗಳೂರು, ಇಟಗಿ, ಬಿಡ್ಕಲ್‌ಕಟ್ಟೆ, ಹಾರೋಹಳ್ಳಿ, ಬೇಗೂರು, ಹರಿಹರಪುರ, ಭಟ್ಕಳ, ಕುರಗೋಡು, ಸಂಡೂರು, ಬಾಗೂರು, ಕೆಸ್ತೂರು ಮತ್ತು ಚಿನಕುರಳಿಗಳಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಹೊಸದಾಗಿ ಪ್ರಾರಂಭಿಸಲು ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಹೊರಡಿಸಲಾದ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ, ಕುರಗೋಡು, ಬಳ್ಳಾರಿ ತಾಲ್ಲೂಕು, ಇಲ್ಲಿಗೆ ಬದಲಾಗಿ ಕುಡಿತಿನಿ, ಬಳ್ಳಾರಿ ತಾಲ್ಲೂಕು ಇಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯನ್ನು ಸ್ಥಾಪಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

ಆಯುಕ್ತರು, ಉದ್ಯೋಗ ಮತ್ತು ತರಬೇತಿ, ಬೆಂಗಳೂರು ಇವರು ಮೇಲೆ (4)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಮೇಲ್ಕಂಡ 24 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ವೃತ್ತಿಗಳನ್ನು ಮತ್ತು ಸೂಕ್ತ ಸಿಬ್ಬಂದಿಯನ್ನು ಮಂಜೂರು ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (5)ರಲ್ಲಿ ಹೊರಡಿಸಲಾದ ಆದೇಶದಲ್ಲಿ ರಾಜ್ಯದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಡಿ 2007–08ನೇ ಸಾಲಿನಲ್ಲಿ ಹೊಸದಾಗಿ ಸ್ಥಾಪಿಸಲ್ಪಟ್ಟಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಕೆಳಕಂಡ 9 ವೃತ್ತಿಗಳನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿತ್ತು.

| ಪ್ರತಿ ಸಂಸ್ಥೆಯಲ್ಲಿ ಪ್ರಾರಂಭಿಸಲಾಗುವ ವೃತ್ತಿಗಳು | ಪ್ರತಿ ಸಂಸ್ಥೆಯಲ್ಲಿ ಪ್ರಾರಂಭಿಸಲಾಗುವ ಘಟಕಗಳು | ತರಬೇತಿ ಅವಧಿ |
|---|---|---|
| 1) ಎಲೆಕ್ಟ್ರೀಷಿಯನ್ | 2 ಘಟಕ | 2 ವರ್ಷ |
| 2) ಇಲೆಕ್ಟ್ರಾನಿಕ್–ಮೆಕಾನಿಕ್ | 2 ಘಟಕ | 2 ವರ್ಷ |
| 3) ಪಿಟ್ಟರ್ | 2 ಘಟಕ | 2 ವರ್ಷ |
| 4) ಟರ್ನರ್ | 2 ಘಟಕ | 2 ವರ್ಷ |
| 5) ಎಂ.ಎಂ.ವಿ. | 2 ಘಟಕ | 2 ವರ್ಷ |
| 6) ಐ.ಟಿ ಮತ್ತು ಇ.ಎಸ್.ಎಂ. | 2 ಘಟಕ | 2 ವರ್ಷ |
| 7) ಡೀಸಲ್, ಮೆಕಾನಿಕ್ | 2 ಘಟಕ | 1 ವರ್ಷ |
| 8) ಡ್ರೆಸ್ ಮೇಕಿಂಗ್ | 2 ಘಟಕ | 1 ವರ್ಷ |
| 9) ಎಂ.ಆರ್.ಎ.ಸಿ. | 2 ಘಟಕ | 2 ವರ್ಷ |

ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ರವರ ಪತ್ರದಲ್ಲಿ ಕೋರಿರುವಂತೆ ಮೇಲ್ಕಂಡ 24 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಹೊಸ ಹುದ್ದೆಗಳನ್ನು ಸೃಜಿಸುವ ವಿಷಯವನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 138 ಇಟಿಐ 2007, ಬೆಂಗಳೂರು, ದಿನಾಂಕ 20ನೇ ನವೆಂಬರ್, 2007**

ರಾಜ್ಯದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯಡಿ 2007–08ನೇ ಸಾಲಿನಲ್ಲಿ ಹೊಸದಾಗಿ ಸ್ಥಾಪಿಸಲ್ಪಟ್ಟಿರುವ 24 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಾದ ಮೊಸಳೇಹೊಸಹಳ್ಳಿ, ಕುಣಿಗಲ್, ಉದಯಪುರ, ಸಕಲೇಶಪುರ, ಸಾಲಿಗ್ರಾಮ, ಸಕ್ಕರಾಯಪಟ್ಟಣ, ಗೋಕಾಕ, ಆಲೂರು, ಮಾಗಡಿ, ಶಿಡ್ಲಘಟ್ಟ, ಕಿತ್ತೂರು, ನವಲಗುಂದ,

ಜಗಳೂರು, ಇಟಗಿ, ಬಿಡ್ಕಲ್‌ಕಟ್ಟೆ, ಹಾರೋಹಳ್ಳಿ, ಬೇಗೂರು, ಹರಿಹರಪುರ, ಭಟ್ಕಳ, ಕುಡಿತಿನಿ, ಸಂಡೂರು, ಬಾಗೂರು, ಕೆಸ್ತೂರು ಮತ್ತು ಚಿನಕುರಳಿಗಳಲ್ಲಿ ತುಂಬಾ ಬೇಡಿಕೆ ಇರುವ 05(ಐದು) ವೃತ್ತಿಗಳಿಗೆ ಈ ಕೆಳಕಂಡಂತೆ ಹುದ್ದೆಗಳನ್ನು ಈ ಮೂಲಕ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲು ಮಂಜೂರಾತಿಯನ್ನು ನೀಡಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು | ಪ್ರತಿ ಸಂಸ್ಥೆಗೆ ಸೃಜಿಸಲಾದ ಹುದ್ದೆಗಳ ಸಂಖ್ಯೆ | ಒಟ್ಟು ಸಂಸ್ಥೆಗಳು | ಒಟ್ಟು ಮಂಜೂರಾದ ಹುದ್ದೆಗಳು |
|---|---|---|---|---|
| 1 | ಪ್ರಾಚಾರ್ಯರು (ದರ್ಜೆ–1) | 1 | 24 | 24 |
| 2 | ತರಬೇತಿ ಅಧಿಕಾರಿ | 1 | 24 | 24 |
| 3 | ಆಡಳಿತ ಸಹಾಯಕರು | 1 | 24 | 24 |
| 4 | ಕಿರಿಯ ತರಬೇತಿ ಅಧಿಕಾರಿ | 10 | 24 | 240 |
| 5 | ಕಛೇರಿ ಅಧೀಕ್ಷಕರು | 1 | 24 | 24 |
| 6 | ಪ್ರಥಮ ದರ್ಜೆ ಸಹಾಯಕರು | 2 | 24 | 48 |
| 7 | ದ್ವಿತೀಯ ದರ್ಜೆ ಸಹಾಯಕರು | 1 | 24 | 24 |
| 8 | ಬೆರಳಚ್ಚುಗಾರರು | 1 | 24 | 24 |
| 9 | ಕಾರ್ಯಾಗಾರ ಸಹಾಯಕರು | 5 | 24 | 120 |
| 10 | ಗ್ರೂಪ್–ಡಿ | 3 | 24 | 72 |
| | ಒಟ್ಟು | 26 | | 624 |

ಮೇಲೆ ತಿಳಿಸಿರುವಂತೆ ಒಂದು ತರಬೇತಿ ಸಂಸ್ಥೆಗೆ 26 ಹುದ್ದೆಗಳಂತೆ ಒಟ್ಟು 24 ತರಬೇತಿ ಸಂಸ್ಥೆಗಳಿಗೆ 624 ಹುದ್ದೆಗಳನ್ನು (24x26 =624) ಅಂದರೆ ಒಟ್ಟು ಆರುನೂರ ಇಪ್ಪತ್ನಾಲ್ಕು ಹುದ್ದೆಗಳನ್ನು ಮಾತ್ರ ಸೃಜಿಸಲು ಮಂಜೂರಾತಿ ನೀಡಲಾಗಿದೆ. ಅಲ್ಲದೆ, ಗ್ರೂಪ್–ಡಿ ಹುದ್ದೆಗೆ ಸಂಬಂಧಿಸಿದ ಹುದ್ದೆಗಳನ್ನು ಬಾಹ್ಯ ಮೂಲಗಳಿಂದ ತುಂಬಲು ಸೂಚಿಸಲಾಗಿದೆ.

ಈ ಪ್ರಸ್ತಾವನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2230–03–101–0–35–059 ಇತರೆ ಖರ್ಚು" ಅಡಿ ಭರಿಸಲು ಮಂಜೂರಾತಿ ನೀಡಲಾಗಿದೆ.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 668 ವೆಚ್ಚ–9/2007 ದಿನಾಂಕ 15–11–2007ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.2044

**ಅಬ್ದುಲ್ ರೆಹಮಾನ್**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ

(ಉದ್ಯೋಗ ಮತ್ತು ತರಬೇತಿ).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ 2006–07ನೇ ಸಾಲಿನ ರಾಜ್ಯದ ಪಾಲಿನ ಎರಡನೇ ಕಂತಿನ ಬಾಕಿ ಅನುದಾನವನ್ನು ರಾಜ್ಯದ 11 ಜಿಲ್ಲೆಗಳಿಗೆ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ:** 1. ಕೇಂದ್ರ ಸರ್ಕಾರದ ಪತ್ರಗಳ ಸಂಖ್ಯೆ: ಜೆ.12022/1/2006, ಎಸ್‌ಜಿಆರ್‌ವೈ, ಕ್ರಮ ಸಂ. 47, ದಿನಾಂಕ 7–12–06, ಕ್ರಮ ಸಂಖ್ಯೆ 63, ದಿನಾಂಕ 12–12–2006/ಕ್ರಮ ಸಂಖ್ಯೆ 73, ದಿನಾಂಕ
21–12–06/ಕ್ರಮ ಸಂಖ್ಯೆ: 79, ದಿನಾಂಕ 29–12–06/ಕ್ರ.ಸಂ. 127 ದಿನಾಂಕ 7–2–07/ಕ್ರಮ ಸಂಖ್ಯೆ 153, ದಿನಾಂಕ 2–3–07/ಕ್ರಮ ಸಂಖ್ಯೆ 169, ದಿನಾಂಕ 15–3–07

**2.** ಆರ್ಥಿಕ ಇಲಾಖೆಯ ಆದೇಶ ಸಂ. ಎಫ್‌ಡಿ/7/ಜೆಡ್‌ಪಿಎ/2003, ದಿನಾಂಕ 14–7–05.

**3.** ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ/15/ಎಸ್‌ಜಿಆರ್‌ವೈ/2007, ದಿನಾಂಕ 3–5–2007.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು 2006–07ನೇ ಸಾಲಿಗೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಉಲ್ಲೇಖ (1)ರ ಪತ್ರದಲ್ಲಿ ಕೇಂದ್ರದ ಪಾಲಿನ ಎರಡನೇ ಕಂತಿನ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ

ನೇರವಾಗಿ ಬಿಡುಗಡೆ ಮಾಡಿ, ರಾಜ್ಯದ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಆದೇಶಿಸಿದೆ. ಉಲ್ಲೇಖ (3)ರ ಆದೇಶದಲ್ಲಿ 2007-08ನೇ ಸಾಲಿಗೆ ಎಸ್‌ಜಿಆರ್‌ವೈ ಕಾರ್ಯಕ್ರಮಕ್ಕೆ ಆಯವ್ಯಯದಲ್ಲಿ ಒದಗಿಸಲಾಗಿರುವ ಒಟ್ಟು ಅನುದಾನದಲ್ಲಿ 1/3 ರಷ್ಟನ್ನು ಮಾತ್ರ ವಿನಿಯೋಗಿಸಲು ಲೇಖಾನುದಾನ ಕಲ್ಪಿಸಿರುವ ಹಿನ್ನೆಲೆಯಲ್ಲಿ 2007-08ನೇ ಸಾಲಿಗೆ ಲಭ್ಯವಿರುವ ಅನುದಾನದಲ್ಲಿ ರಾಜ್ಯದ ಪಾಲಿನ ಬಾಕಿ ಅನುದಾನ ರೂ. 280.244 ಲಕ್ಷಗಳನ್ನು ಮಾತ್ರ (ಶೇಕಡಾ 20ರ, 30ರ ಹಾಗೂ 50ರ ಭಾಗಾಂಶದ ಅನುದಾನ) ಬಿಡುಗಡೆ ಮಾಡಲಾಗಿರುತ್ತದೆ. ಪ್ರಸ್ತುತ ಬಾಕಿ ಇರುವ ರೂ. 22.021 ಲಕ್ಷಗಳನ್ನು 20% ಜಿಲ್ಲಾ ಪಂಚಾಯತಿ ಕಾರ್ಯಕ್ರಮಗಳಿಗಾಗಿ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 15 ಎಸ್‌ಜಿಆರ್ 2007, ಬೆಂಗಳೂರು, ದಿನಾಂಕ 20ನೇ ಆಗಸ್ಟ್, 2007**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2006-07ನೇ ಸಾಲಿಗೆ ಸೇರಿದ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯ ಜಿಲ್ಲಾ ಪಂಚಾಯತಿ, ಕಾರ್ಯಕ್ರಮಗಳಿಗಾಗಿ ಬಿಡುಗಡೆ ಮಾಡಬೇಕಾದ ಬಾಕಿ ಅನುದಾನ ಒಟ್ಟು ರೂ. 22.021 ಲಕ್ಷಗಳನ್ನು (ರೂ. ಇಪ್ಪತ್ತೆರಡು ಲಕ್ಷ ಎರಡು ಸಾವಿರದ ನೂರುಗಳನ್ನು ಮಾತ್ರ) 2007-08ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಿಂದ ರಾಜ್ಯದ ಹನ್ನೊಂದು ಜಿಲ್ಲಾ ಪಂಚಾಯತಿಗಳಿಗೆ ಅನುಬಂಧದಲ್ಲಿ ನಮೂದಿಸಿದಂತೆ ಬಿಡುಗಡೆ ಮಾಡಿದೆ.

ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಗೆ ಹಾಗೂ 2007-08ನೇ ಸಾಲಿನಲ್ಲಿ ಕರ್ನಾಟಕ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಈಗಾಗಲೇ ಕೇಂದ್ರ ಸರ್ಕಾರವು ಹೊರಡಿಸಿರುವ ಹೊಸ ಮಾರ್ಗಸೂಚಿಯನ್ವಯ ಹಾಗೂ ರಾಜ್ಯ ಸರ್ಕಾರಗಳು ಆಗಿಂದಾಗ್ಗೆ ಹೊರಡಿಸಲಾಗುವ ಆದೇಶ, ಸುತ್ತೋಲೆಗಳಲ್ಲಿ ತಿಳಿಸಿರುವ ರೀತ್ಯಾ ಎಲ್ಲಾ ಷರತ್ತು ಮತ್ತು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ದಿನಾಂಕ 25-4-2007 ಮತ್ತು 26-4-2007ರಂದು ನಡೆದ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಸಭೆಯಲ್ಲಿ, 2007-08ನೇ ಸಾಲಿನಲ್ಲಿ ಎಸ್‌ಜಿಆರ್‌ವೈ ಯೋಜನೆಯಿಂದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯೊಂದಿಗೆ ವಿಲೀನಗೊಂಡಿರುವಂತಹ ಆರು ಜಿಲ್ಲೆಗಳಿಗೆ ಕೇಂದ್ರ ಸರ್ಕಾರದ ಅ.ಸ. ಪತ್ರ ಸಂಖ್ಯೆ: V-24011/ 34/2001- SGRY-I ದಿನಾಂಕ 23-3-2007ರಲ್ಲಿ ನೀಡಿರುವ ನಿರ್ದೇಶನವನ್ನು ಪಾಲಿಸುವಂತೆ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಮಾನ್ಯ ಪ್ರಧಾನ ಕಾರ್ಯದರ್ಶಿಯವರು ಸೂಚಿಸಿರುವಂತೆ ಕ್ರಮಕೈಗೊಳ್ಳುವುದು. ತದನಂತರ, ಕೇಂದ್ರ ಸರ್ಕಾರದ ಅ.ಸ. ಪತ್ರ ಸಂಖ್ಯೆ V-24011/34/2001-NFFWP/NREGA ದಿನಾಂಕ 2-8-2007ರಲ್ಲಿ ತನ್ನ ಹಿಂದಿನ ಅ.ಸ. ಪತ್ರದ ದಿನಾಂಕ 23-3-07 ಅನ್ನು ಮುಂದುವರೆಸುತ್ತಾ ಹೆಚ್ಚಿನ ಮಾರ್ಗದರ್ಶನವನ್ನು ನೀಡಿರುವುದರಿಂದ ಸದರಿ ಪತ್ರದಲ್ಲಿನ ಎಲ್ಲಾ ಅಂಶಗಳನ್ನು ಗಮನಿಸಿ ಆದ್ಯತೆ ಮೇರೆಗೆ ಕ್ರಮಕೈಗೊಳ್ಳುವುದು.

ಯೋಜನೆಯ ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು. ಜಿಲ್ಲಾ ಪಂಚಾಯತಿ "2505-ಗ್ರಾಮೀಣ ಉದ್ಯೋಗ-60-ಇತರೆ ಕಾರ್ಯಕ್ರಮಗಳು-196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ-6-ಜಿಲ್ಲಾ ಪಂಚಾಯತಿಗಳು-04-ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (2505-60-196-6-04) 2007-08 (ಯೋಜನೆ)" ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14-7-2005 ಮತ್ತು ತಿದ್ದುಪಡಿ ಆದೇಶ ಸಂಖ್ಯೆ: ಎಫ್‌ಡಿ-1/ಜಡ್‌ಪಿಎ 2007 (ಪಿ-2) ದಿನಾಂಕ 26-4-2007ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ನಿಧಿ-1ಕ್ಕೆ ಜಮೆ ಮಾಡಿಕೊಂಡು ವೆಚ್ಚವನ್ನು ನಿರ್ವಹಣೆ ಮಾಡುವುದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಗ್ರಾಅಪ/339/ ಪಿಬಿಎಸ್/07, ದಿನಾಂಕ 16-8-2007ರಲ್ಲಿ ಸಹಮತಿಸಿದಂತೆ, ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ರಶ್ಮಿ ಮಹೇಶ್,**

ನಿರ್ದೇಶಕರು,

ಸ್ವಉದ್ಯೋಗ ಕಾರ್ಯಕ್ರಮಗಳು ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**Annexure to G.O. No. RDP/15/SGR/2007, Bangalore, Dated 20-8-2007**

**Statement showing the balance of IInd instalment (State Share) pertaining to 2006-07, released during 2007-08 under SGRY (Rs. in lakhs)**

| Sl. No. | District | Code No. | Total State share of IInd instalment already released in previous orders | Funds released in this order under Head of Account 2505-60-196-6-04 (20% ZP share) |
|---|---|---|---|---|
| 1 | Bangalore (U) | 401 | 92.573 | 3.143 |
| 2 | Belgaum | 413 | 115.242 | 0.161 |
| 3 | Hassan | 410 | 117.172 | 2.868 |
| 4 | Koppal | 466 | 77.80 | 1.900 |
| 5 | Mysore | 407 | 98.33 | 1.460 |
| 6 | Shimoga | 405 | 70.227 | 1.719 |
| 7 | Tumkur | 406 | 177.473 | 3.443 |
| 8 | Bagalkote | 461 | 87.758 | 2.152 |
| 9 | Udupi | 457 | 44.696 | 1.824 |
| 10 | Kodagu | 411 | 70.542 | 1.711 |
| 11 | Gadag | 462 | 66.76 | 1.640 |
| | | | **1018.573** | **22.021** |

**V. RASHMI MAHESH**
Director (SEP)
E/o Joint Secretary to Government
Rural Development & Panchayat Raj Department.

P.R. 1585

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ರಾಮನಗರ ಜಿಲ್ಲೆಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಕ್ಕೆ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆ ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಲಾ 210 ಎಲ್‌ಸಿಇ 2007 (ಭಾಗ–1), ದಿನಾಂಕ 27–9–2007.

**2.** ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಓಬಿ II/185/2007, ದಿನಾಂಕ 4–9–2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಮನಗರ ಜಿಲ್ಲೆಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ರಿಜಿಸ್ಟ್ರಾರ್ ಜನರಲ್‌ರವರ ಪತ್ರದಲ್ಲಿ ಹೊಸದಾಗಿ ಸ್ಥಾಪನೆಯಾದ ರಾಮನಗರ ಜಿಲ್ಲೆಗೆ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆ ಸೃಜಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 120 ಎಲ್‌ಎಜಿ 2007, ಬೆಂಗಳೂರು, ದಿನಾಂಕ 29ನೇ ಸೆಪ್ಟೆಂಬರ್, 2007**

ರಾಮನಗರ ಜಿಲ್ಲೆಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಕ್ಕೆ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆ ಸೃಜಿಸುವುದರ ಅವಶ್ಯಕತೆ ಇರುವುದರಿಂದ ಜಿಲ್ಲಾ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು (1977) ಷೆಡ್ಯೂಲ್ 06ರ ಪಟ್ಟಿಗೆ ಉಲ್ಲೇಖಿತ ಹುದ್ದೆಯನ್ನು ಕ್ರಮ ಸಂಖ್ಯೆ: 29 ಎಂಬುದಾಗಿ ಸೇರಿಸಿಕೊಳ್ಳತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 1078/ವೆಚ್ಚ–7/2007, ದಿನಾಂಕ 25–9–2007ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಇ. ಶಿವಾನಂದ,**
ಪಿ.ಆರ್. 2050 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಸರ್ಕಾರಿ ಭೂಮಿ ಒತ್ತುವರಿಯಾಗುವುದನ್ನು ತಡೆಗಟ್ಟುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 36 ಎಲ್‌ಎಜಿ 2006, ದಿನಾಂಕ 28–8–2006
**2.** ಸರ್ಕಾರಿ ಅಧಿಸೂಚನೆ ಸಂಖ್ಯೆ: ಲಾ 36 ಎಲ್‌ಎಜಿ 2006, ದಿನಾಂಕ 30–12–2006
**5.** ಸರ್ಕಾರಿ ಆದೇಶ ಸಂಖ್ಯೆ: ಲಾ 36 ಎಲ್‌ಎಜಿ 2006, ದಿನಾಂಕ 14–2–2007
**6.** ಅ.ಸ.ಪತ್ರ ಸಂಖ್ಯೆ ಪಿಯುಸಿ (ಜಾದ) ಸಿಆರ್/55/2007–08, ದಿನಾಂಕ 23–7–2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು (ನಗರ), ಇವರ ಕಛೇರಿಯಲ್ಲಿ ಕಾನೂನು ಕೋಶಕ್ಕೆ ನಾಲ್ಕು ವಿಶೇಷ ಸರ್ಕಾರಿ ವಕೀಲರ ಹುದ್ದೆಗಳನ್ನು ಸೃಜಿಸಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಆ ಹುದ್ದೆಗಳಿಗೆ ವಕೀಲರನ್ನು ನೇಮಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು (ನಗರ), ಇವರ ಕಛೇರಿಯಲ್ಲಿ ಕಾನೂನು ಕೋಶದಲ್ಲಿ ಕಾರ್ಯನಿರ್ವಹಿಸುವ ವಿಶೇಷ ಸರ್ಕಾರಿ ವಕೀಲರಿಗೆ ಪ್ರತಿ ದಿನದ ಎಫೆಕ್ಟಿವ್ ಅಪಿಯರೆನ್ಸ್ ಹಾಗೂ ನಾನ್ ಎಫೆಕ್ಟಿವ್ ಅಪಿಯರೆನ್ಸ್‌ಗೆ ಕ್ರಮವಾಗಿ ರೂ. 500–00 (ಐನೂರು ರೂಪಾಯಿಗಳೂ ಮಾತ್ರ) ಮತ್ತು ರೂ. 200–00 (ಇನ್ನೂರು ರೂಪಾಯಿಗಳು ಮಾತ್ರ) ಮೊತ್ತದ ಸಂಭಾವನೆ ಪಾವತಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ಮೇಲೆ ಓದಲಾದ (4)ರ ಬೆಂಗಳೂರು (ನಗರ) ಜಿಲ್ಲಾಧಿಕಾರಿಗಳ ಅರೆ ಸರ್ಕಾರಿ ಪತ್ರದಲ್ಲಿ ದಿನಾಂಕ 14–2–2007ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಿರುವ ಸಂಭಾವನೆ ದರಗಳನ್ನು ಕೆಳ ನ್ಯಾಯಾಲಯದ ಸಿವಿಲ್ ಕೇಸುಗಳಿಗೆ ಸೀಮಿತಗೊಳಿಸಿ ಉಚ್ಚ ನ್ಯಾಯಾಲಯದ ಪ್ರಕರಣಗಳಿಗೆ ಸಂಭಾವನೆ ದರಗಳನ್ನು ಪರಿಷ್ಕರಿಸುವಂತೆ ಕೋರಿರುತ್ತಾರೆ. ಅಂತಹ ವಿಶೇಷ ವಕೀಲರಿಗೆ ಪಾವತಿಸಬೇಕಾದ ಸಂಭಾವನೆ ಕುರಿತಂತೆ ಅಡ್ವೋಕೇಟ್ ಜನರಲ್‌ರವರೊಂದಿಗೆ ಸಮಾಲೋಚಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 36 ಎಲ್‌ಎಜಿ 2006, ಬೆಂಗಳೂರು, ದಿನಾಂಕ 4ನೇ ಅಕ್ಟೋಬರ್, 2007**

ಜಿಲ್ಲಾಧಿಕಾರಿಗಳು, ಬೆಂಗಳೂರು (ನಗರ), ಇವರ ಕಛೇರಿಯ ಕಾನೂನು ಕೋಶದಲ್ಲಿ ಕಾರ್ಯನಿರ್ವಹಿಸುವ ವಿಶೇಷ ಸರ್ಕಾರಿ ವಕೀಲರಿಗೆ ದಿನಾಂಕ 14–2–2007ರ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಿರುವ ಸಂಭಾವನೆ ದರಗಳನ್ನು ಕೆಳ ನ್ಯಾಯಾಲಯದ ಸಿವಿಲ್ ಕೇಸುಗಳಿಗೆ ಸೀಮಿತಗೊಳಿಸಿ ಉಚ್ಚ ನ್ಯಾಯಾಲಯದ ಪ್ರಕರಣಗಳಿಗೆ ಈ ಕೆಳಕಂಡ ಸಂಭಾವನೆ ದರಗಳನ್ನು ಪಾವತಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1 | ರಿಟ್ ಅರ್ಜಿಗಳಲ್ಲಿ ಭಾಗವಹಿಸಿ ರಿಟ್ ಅರ್ಜಿ ಅದೇ ದಿನಾಂಕ ಇತ್ಯರ್ಥಗೊಂಡಲ್ಲಿ | ರೂ. 1000–00 |
| 2 | ಇತ್ಯರ್ಥವಾಗದೇ ಇದ್ದ ಪ್ರಕರಣಗಳಲ್ಲಿ ಪ್ರತಿ ಮುಂದಿನ ದಿನಾಂಕಗಳಲ್ಲಿ:–<br>(ಅ) ಪರಿಣಾಮಕಾರಿಯಾದ ವಿಚಾರಣೆ (Effective hearing) ಪ್ರತಿದಿನ ಪ್ರತಿ ಪ್ರಕರಣಕ್ಕೆ<br>(ಆ) ಪರಿಣಾಮಕಾರಿಯಲ್ಲದ ವಿಚಾರಣೆ (Non-effective hearing ) – ಪ್ರತಿದಿನ ಪ್ರತಿ ಪ್ರಕರಣಕ್ಕೆ | <br>ರೂ. 500–00<br>ರೂ. 200–00 |
| 3 | CAVEAT ಅರ್ಜಿ ಹಾಗೂ I.A. (ಶೀಘ್ರ ವಿಚಾರಣೆಗೆ ತೆಗೆದುಕೊಳ್ಳಲು ಹಾಕುವ I.A. ಹೊರತುಪಡಿಸಿ) ದಾಖಲಿಸಲು | ರೂ. 400–00 + ವಾಸ್ತವಿಕ ಖರ್ಚು |
| 4 | ಅಂತಿಮವಾಗಿ ತೀರ್ಮಾನವಾಗುವ ಪ್ರತಿ ಪ್ರಕರಣಕ್ಕೆ | ರೂ. 1000–00 |
| 5 | ಪ್ರತಿ ಪ್ರಕರಣದಲ್ಲಿ ಅಭಿಪ್ರಾಯ | ರೂ. 500–00 |

ಈ ಸಂಬಂಧದ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-114-0-01(015-ಪೂರಕ ವೆಚ್ಚಗಳು)"ರ ಅಡಿ ಭರಿಸುವುದು.

ಇದನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 16 ವೆಚ್ಚ-7/07, ದಿನಾಂಕ 21-9-2007ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ,**

ಪಿ.ಆರ್. 2055

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಇಲಾಖಾ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 63 ಎಸ್ಇಎನ್ 2005, ದಿನಾಂಕ 6-6-2007.

**2.** ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು, ಇವರ ಪತ್ರ ದಿನಾಂಕ 15-10-2007.

**ಪ್ರಸ್ತಾವನೆ:**

ಸರ್ಕಾರವು ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಕ್ರ.ಸಂ. 1ರ ಆದೇಶದಲ್ಲಿ ನೇಮಕ ಮಾಡಲಾಗಿತ್ತು.

ಕ್ರ.ಸಂ. (2)ರ ಪತ್ರದಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿರವರು ತಮ್ಮ ವೈಯಕ್ತಿಕ ಕಾರಣಗಳಿಂದಾಗಿ ಇಲಾಖಾ ವಿಚಾರಣೆ ನಡೆಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿರುವುದರಿಂದ ಸರ್ಕಾರವು ಈ ಬಗ್ಗೆ ಸದರಿಯವರ ಮನವಿಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಎಸ್ಇಎನ್ 2005, ಬೆಂಗಳೂರು, ದಿನಾಂಕ 7ನೇ ನವೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರವು ಶ್ರೀ ಎನ್.ಎಸ್. ಸಂಗೊಳ್ಳಿಯವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿರುವುದನ್ನು ಹಿಂದಕ್ಕೆ ಪಡೆದು ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್ ಇವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿರುತ್ತದೆ.

ವಿಚಾರಣಾಧಿಕಾರಿಯವರ ಮುಂದೆ ಪ್ರಕರಣ ಮಂಡಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 63 ಎಸ್ಇಎನ್ 2005, ದಿನಾಂಕ 6-6-2007ರಲ್ಲಿ ನೇಮಕ ಮಾಡಿರುವ ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಕಾಡಾ) ರವರನ್ನೇ ಮುಂದುವರಿಸಿದೆ ಹಾಗೂ ವಿಚಾರಣಾಧಿಕಾರಿಗಳಿಗೆ ಸ್ಥಳವಕಾಶವನ್ನು ಹಾಗೂ ಇತರೆ ಸೇವೆಗಳನ್ನು ಒದಗಿಸಲು ಸರ್ಕಾರದ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ಇವರು ಕ್ರಮ ಕೈಗೊಳ್ಳತಕ್ಕದ್ದು. ವಿಚಾರಣೆಯನ್ನು 3 ತಿಂಗಳೊಳಗಾಗಿ ವಿಚಾರಣೆ ನಡೆಸಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಪಿ.ಆರ್. 2012

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

(ಸೇವೆಗಳು-3).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 90 ಸಸಿವಿ 2006, ದಿನಾಂಕ 2-12-2006.

**2.** ಟಿಪ್ಪಣಿ ಸಂಖ್ಯೆ: ಕೃತೋಇ 83 ಪ್ರಕಾ/2007 ದಿನಾಂಕ 5-11-2007

3. ಮಹಾಲೇಖಪಾಲರ ಪತ್ರ ಸಂಖ್ಯೆ: ಜಿಎಂ/ಐಎಎಸ್/1/ವಿಓಎಲ್/ವಿಬಿ/07–08/582–584, ದಿನಾಂಕ 29–10–2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶ ದಿನಾಂಕ 2–12–2006ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯ ಅವಧಿಯನ್ನು ದಿನಾಂಕ 6–7–2006ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿತ್ತು. ಸದರಿ ಅವಧಿಯು ದಿನಾಂಕ 6–7–2007ರಂದು ಕೊನೆಗೊಂಡಿದ್ದರಿಂದ ಈ ಹುದ್ದೆಯನ್ನು ಮತ್ತೊಂದು ವರ್ಷ ಅವಧಿಗೆ ಮುಂದುವರಿಸುವಂತೆ ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ 5–11–2007ರ ಟಿಪ್ಪಣಿಯಲ್ಲಿ ಕೃಷಿ ಮತ್ತು ತೋಟಗಾರಿಕೆ ಇಲಾಖೆಯು ಕೋರಿದೆ.

ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 528 ಸಅಸೇ 2007, ಬೆಂಗಳೂರು, ದಿನಾಂಕ 7ನೇ ನವೆಂಬರ್, 2007**

ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ 6–7–2007ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವಮೂರ್ತಿ**

ಪಿ.ಆರ್. 2014

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

(ಸೇವೆಗಳು–3).

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಇಡಿ 588 ಡಿಪಿಐ 2002, ಬೆಂಗಳೂರು, ದಿನಾಂಕ 25ನೇ ಅಕ್ಟೋಬರ್, 2007**

ಸರ್ಕಾರದ ಆದೇಶ ಸಂಖ್ಯೆ: ಇಡಿ 588 ಡಿಪಿಐ 2002, ದಿನಾಂಕ 8–3–2007ರ ಆದೇಶದಲ್ಲಿ ವಿಳಾಸ ಭಾಗದ ಕ್ರಮ ಸಂಖ್ಯೆ: 4ರಲ್ಲಿ "ನಿರ್ದೇಶಕರು, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು" ಎಂದು ಮತ್ತು ಆದೇಶ ಭಾಗದ ಕಂಡಿಕೆ–4ರ 7ನೇ ಸಾಲಿನ ಪಾವತಿ ಮಾಡಲು ಎಂಬ ಪದದ ನಂತರ "ಲೆಕ್ಕ ಶೀರ್ಷಿಕೆ 2701–01–104–2–006ಯಲ್ಲಿ" ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಂ. ಹಿರೇಮಠ**

ಪಿ.ಆರ್. 1970

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಸೇವೆಗಳು–1, 2).

**ಆರ್ಥಿಕ ಸಚಿವಾಲಯ**

**ವಿಷಯ:** ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ತುಟ್ಟಿಭತ್ಯೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಆಇ 48 ಎಸ್‌ಆರ್‌ಪಿ 1999, ದಿನಾಂಕ 18–1–1999

2. ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಇ 17 ಎಸ್‌ಆರ್‌ಪಿ 2007, ದಿನಾಂಕ 16–5–2007
3. ಸರ್ಕಾರಿ ಆದೇಶ ಸಂಖ್ಯೆ: ಆಇ 19 ಎಸ್‌ಆರ್‌ಪಿ 2007, ದಿನಾಂಕ 16–5–2007
4. ಸರ್ಕಾರಿ ಆದೇಶ ಸಂಖ್ಯೆ: ಆಇ 21 ಎಸ್‌ಆರ್‌ಪಿ 2007, ದಿನಾಂಕ 28–5–2007
5. ಸರ್ಕಾರಿ ಆದೇಶ ಸಂಖ್ಯೆ: ಲಾ 62 ಎಲ್‌ಎಸಿ 2006, ದಿನಾಂಕ 10–9–2007
6. ಸರ್ಕಾರಿ ಆದೇಶ ಸಂಖ್ಯೆ: ಆಇ 42 ಎಸ್‌ಆರ್‌ಪಿ 2007, ದಿನಾಂಕ 27–9–2007.

**ಪ್ರಸ್ತಾವನೆ:**

ರಾಜ್ಯ ಸರ್ಕಾರವು ತನ್ನ ನೌಕರರಿಗೆ ತುಟ್ಟಿಭತ್ಯೆಯನ್ನು ಮಂಜೂರು ಮಾಡುವ ಉದ್ದೇಶಕ್ಕಾಗಿ ಕೇಂದ್ರ ಸರ್ಕಾರದ ತುಟ್ಟಿಭತ್ಯೆ ಸೂತ್ರವನ್ನೇ ಅಳವಡಿಸಿಕೊಂಡಿರುವುದರಿಂದ, ಈ ಕುರಿತು ರಾಜ್ಯ ಸರ್ಕಾರವು ಹೊರಡಿಸಿರುವ ಆದೇಶಗಳನ್ನು ನ್ಯಾಯಾಂಗ ಅಧಿಕಾರಿಗಳಿಗೂ ಸಹ ಅನ್ವಯ ಮಾಡಲಾಗುತ್ತಿದೆ.

2. 1998ರ ಅಧಿಕಾರಿ ವೇತನ ಸಮಿತಿಯ ಶಿಫಾರಸ್ಸುಗಳಿಗನುಸಾರವಾಗಿ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ದಿನಾಂಕ 1–4–1998ರಿಂದ ಜಾರಿಗೆ ಬರುವಂತೆ ಮೇಲೆ (1)ರಲ್ಲಿ ಓದಲಾದ ದಿನಾಂಕ 18–1–1999ರ ಆದೇಶದಲ್ಲಿ ಪರಿಷ್ಕರಿಸಲಾಗಿದೆ. ಹಾಗೂ ಸದರಿ ಆದೇಶದಲ್ಲಿ ರಾಜ್ಯ ಸರ್ಕಾರಿ ನೌಕರರಿಗೆ ಸಂದಾಯವಾಗಬೇಕಾದ ತುಟ್ಟಿಭತ್ಯೆಯನ್ನು ಔದ್ಯಮಿಕ ಕೆಲಸಗಾರರ ಅಖಿಲ ಭಾರತ ಸರಾಸರಿ ಗ್ರಾಹಕರ ಬೆಲೆ ಸೂಚ್ಯಂಕಗಳಿಗೆ ಸಂಬಂಧಿಸಿದಂತೆ 1510 ಅಂಶಗಳ 12 ತಿಂಗಳ ಸರಾಸರಿ ಬೆಲೆ ಸೂಚ್ಯಂಕದ ಮೇಲಿನ ಬೆಲೆ ಹೆಚ್ಚಳಕ್ಕನುಗುಣವಾಗಿ ಕ್ರಮಬದ್ಧಪಡಿಸತಕ್ಕದ್ದು ಎಂದು ಆದೇಶಿಸಲಾಗಿದೆ.

3. ಮುಂದುವರೆದು, 5ನೇ ರಾಜ್ಯ ವೇತನ ಆಯೋಗದ ಶಿಫಾರಸ್ಸಿನ ಮೇರೆಗೆ, ಮೇಲೆ (2)ರಲ್ಲಿ ಓದಲಾದ ದಿನಾಂಕ 16–5–2007ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ದಿನಾಂಕ 1–7–2005ರಿಂದ ಪರಿಷ್ಕರಿಸಿರುವುದರಿಂದ ಮೇಲೆ (3)ರಲ್ಲಿ ಓದಲಾದ ದಿನಾಂಕ 16–5–2007ರ ಆದೇಶದ ಕಂಡಿಕೆ 8ರಲ್ಲಿ ದಿನಾಂಕ 1–4–2006 ರಿಂದ ತುಟ್ಟಿ ಭತ್ಯೆಯನ್ನು ಮಂಜೂರು ಮಾಡುವಾಗ ಕೇಂದ್ರ ಸರ್ಕಾರವು ತನ್ನ ನೌಕರರಿಗೆ ಮಂಜೂರು ಮಾಡುವ ಪ್ರತಿ ಶೇ.1ರಷ್ಟು ತುಟ್ಟಿ ಭತ್ಯೆಗೆ 0.875 ಗುಣಾಕಾರಾಂಶದಷ್ಟು (multiplication factor) ತುಟ್ಟಿ ಭತ್ಯೆಯನ್ನು ಮಂಜೂರು ಮಾಡುವ ಹೊಸ ಸೂತ್ರಕ್ಕನುಗುಣವಾಗಿ, ದಿನಾಂಕ 1–4–2006ರಿಂದ ಶೇ. 2.625ರ ದರದಲ್ಲಿ, ದಿನಾಂಕ 1–7–2006 ರಿಂದ ಶೇ. 7ರ ದರದಲ್ಲಿ ಮತ್ತು ಮೇಲೆ (4)ರಲ್ಲಿ ಓದಲಾದ ದಿನಾಂಕ 28–5–2007ರ ಆದೇಶದಲ್ಲಿ ದಿನಾಂಕ 1–1–2007ರಿಂದ ಶೇ. 12.25ರ ದರದಲ್ಲಿ ಹಾಗೂ ಮೇಲೆ (6)ರಲ್ಲಿ ಓದಲಾದ ದಿನಾಂಕ 27–9–2007ರ ಆದೇಶದಲ್ಲಿ ದಿನಾಂಕ 1–7–2007ರಿಂದ ಜಾರಿಗೆ ಬರುವಂತೆ ಶೇ. 17.5ರ ದರದಲ್ಲಿ ರಾಜ್ಯ ಸರ್ಕಾರಿ ನೌಕರರಿಗೆ ತುಟ್ಟಿ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

4. ಈ ಆದೇಶಗಳಲ್ಲಿನ ಅಂದರೆ ಮೇಲೆ (3)ರಲ್ಲಿ ಓದಲಾದ ದಿನಾಂಕ 16–5–2007ರ ಆದೇಶದ ಕಂಡಿಕೆ 8ರಲ್ಲಿ ಮತ್ತು ಮೇಲೆ (4)ರಲ್ಲಿ ಓದಲಾದ ದಿನಾಂಕ 28–5–2007ರ ಆದೇಶದ ಕಂಡಿಕೆ 6ರಲ್ಲಿ ತುಟ್ಟಿ ಭತ್ಯೆಯನ್ನು ಲೆಕ್ಕ ಹಾಕಲು "ಯುಜಿಸಿ, ಎಐಸಿಟಿಇ ಮತ್ತು ಐಸಿಎಆರ್ ವೇತನ ಶ್ರೇಣಿಗಳಲ್ಲಿರುವ ಬೋಧಕ ಸಿಬ್ಬಂದಿ, ಗ್ರಂಥಪಾಲಕರು ಮತ್ತು ದೈಹಿಕ ಶಿಕ್ಷಣ ಸಿಬ್ಬಂದಿ ಮತ್ತು ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿರುವ ನ್ಯಾಯಾಂಗ ಅಧಿಕಾರಿಗಳ ವಿಷಯದಲ್ಲಿ ಅವರ ಮೂಲ ವೇತನಕ್ಕೆ ಸರ್ಕಾರಿ ಆದೇಶ ಸಂಖ್ಯೆ: ಆಇ 48 ಎಸ್‌ಆರ್‌ಪಿ 2005, ದಿನಾಂಕ 28–10–2005ರಲ್ಲಿ 1ನೇ ಜುಲೈ 2005ರವರೆಗೆ ಮಂಜೂರು ಮಾಡಲಾದ ತುಟ್ಟಿ ಭತ್ಯೆಯು ಸೇರುತ್ತದೆ" ಎಂದು ಆದೇಶಿಸಲಾಗಿತ್ತು.

5. ಆದರೆ, ಅಖಿಲ ಭಾರತ ನ್ಯಾಯಾಧೀಶರ ಸಂಘ ಮತ್ತು ಇತರರು ದಾಖಲಿಸಿದ್ದ ರಿಟ್ ಪಿಟಿಷನ್ ಸಂಖ್ಯೆ: 1022/89ರ ಮೇಲೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ 9–5–2007ರಂದು ನೀಡಿದ್ದ ತೀರ್ಪಿನ ಮೇರೆಗೆ ಮತ್ತು ಕೇಂದ್ರ ಸರ್ಕಾರವು ತನ್ನ ನೌಕರರಿಗೆ ಆದೇಶಿಸಿರುವಂತೆ ಮೇಲೆ (5)ರಲ್ಲಿ ಓದಲಾದ ದಿನಾಂಕ 10–9–2007ರ ಆದೇಶದಲ್ಲಿ ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಶೇಕಡಾ 50ರಷ್ಟು ತುಟ್ಟಿಭತ್ಯೆಯನ್ನು ಅವರ ಮೂಲ ವೇತನದಲ್ಲಿ ದಿನಾಂಕ 1–4–2004 ರಿಂದ ಜಾರಿಗೆ ಬರುವಂತೆ ವಿಲೀನಗೊಳಿಸಲು ಮತ್ತು ಅದನ್ನು ತುಟ್ಟಿ ವೇತನ ಎಂದು ಪರಿಗಣಿಸಲು ಸರ್ಕಾರವು ಮಂಜೂರಾತಿ ನೀಡಿದೆ.

6. ತತ್ಪರಿಣಾಮವಾಗಿ, ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳು ಕೇಂದ್ರ ಸರ್ಕಾರವು ಕಾಲಕಾಲಕ್ಕೆ ಹೊರಡಿಸಲಾಗುವ ತುಟ್ಟಿಭತ್ಯೆಯ ದರಕ್ಕೆ ಅರ್ಹರಾಗುವುದರಿಂದ, ಇವರಿಗೆ ದಿನಾಂಕ 1–4–2004ರಿಂದ ಜಾರಿಗೆ ಬರುವಂತೆ ಅರ್ಹವಿರುವ ತುಟ್ಟಿಭತ್ಯೆಯ ದರವನ್ನು ನಿರ್ದಿಷ್ಟಪಡಿಸುವುದು ಸರ್ಕಾರವು ಪರಿಗಣಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 43 ಎಸ್‌ಆರ್‌ಪಿ 2007, ಬೆಂಗಳೂರು, ದಿನಾಂಕ 27ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಸಂದರ್ಭಗಳಿಗನುಗುಣವಾಗಿ. ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ದಿನಾಂಕ 1–4–2004 ರಿಂದ ಕಾಲಕಾಲಕ್ಕೆ ತುಟ್ಟಿ ಭತ್ಯೆಯನ್ನು ಮಂಜೂರು ಮಾಡಿರುವ ಆದೇಶಗಳನ್ನು ಮಾರ್ಪಡಿಸುತ್ತಾ, ದಿನಾಂಕ 1–4–2004 ರಿಂದ ಅನ್ವಯವಾಗುವಂತೆ ತುಟ್ಟಿಭತ್ಯೆಯನ್ನು ಈ ಕೆಳಗಿನ ದರಗಳಲ್ಲಿ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

| | |
|---|---|
| 1–4–2004 | ಮೂಲ ವೇತನದ ಶೇ. 11 ರಷ್ಟು |
| 1–7–2004 | ಮೂಲ ವೇತನದ ಶೇ. 14 ರಷ್ಟು |
| 1–1–2005 | ಮೂಲ ವೇತನದ ಶೇ. 17 ರಷ್ಟು |

| | |
|---|---|
| 1–7–2005 | ಮೂಲ ವೇತನದ ಶೇ. 21 ರಷ್ಟು |
| 1–1–2006 | ಮೂಲ ವೇತನದ ಶೇ. 24 ರಷ್ಟು |
| 1–7–2006 | ಮೂಲ ವೇತನದ ಶೇ. 29 ರಷ್ಟು |
| 1–1–2007 | ಮೂಲ ವೇತನದ ಶೇ. 35 ರಷ್ಟು |
| 1–7–2007 | ಮೂಲ ವೇತನದ ಶೇ. 41 ರಷ್ಟು |

2. ಈ ಆದೇಶದ ಉದ್ದೇಶಗಳಿಗಾಗಿ 'ಮೂಲ ವೇತನ' ಎಂದರೆ ನ್ಯಾಯಾಂಗ ಅಧಿಕಾರಿಯು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿ ಪಡೆಯುವ ವೇತನ ಮತ್ತು ತುಟ್ಟಿ ವೇತನ.

3. ಮೂಲ ವೇತನಕ್ಕೆ ಇನ್ಯಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

4. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿ ಭತ್ಯೆಯನ್ನು ಅಥವಾ ತುಟ್ಟಿ ಭತ್ಯೆಯ ವ್ಯತ್ಯಾಸವನ್ನು ಮರು ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.

5. ತುಟ್ಟಿ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

6. ತುಟ್ಟಿ ಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಭಾರತದ ರಾಷ್ಟ್ರಪತಿಗಳ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ

**ಸುಂದರ ರಾಜ ಗುಪ್ತ**

ಪಿ.ಆರ್. 1969 ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಸಿಆಸುಇ 162 ಎಸ್‌ಎಫ್‌ಪಿ 2007, ಬೆಂಗಳೂರು, ದಿನಾಂಕ 24ನೇ ಅಕ್ಟೋಬರ್, 2007**

ಭಾರತೀಯ ಅರಣ್ಯ ಸೇವೆಗೆ ಸೇರಿದ ಅಧಿಕಾರಿಗಳು ನಿಯೋಜನೆ ಮೇಲೆ ಮಂಡಳಿ / ನಿಗಮಗಳಲ್ಲಿ / ವಿಶ್ವವಿದ್ಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅವರು ರಜೆಯ ಮೇಲೆ ತೆರಳಬೇಕಾದಲ್ಲಿ ಸರ್ಕಾರದಿಂದ ಪೂರ್ವಾಭಾವಿಯಾಗಿ ರಜೆಯನ್ನು ಮಂಜೂರು ಮಾಡಿಸಿಕೊಂಡು ತೆರಳಬೇಕಾಗಿರುತ್ತದೆ.

ಆದರೆ ಇತ್ತೀಚಿನ ದಿನಗಳಲ್ಲಿ ಭಾರತೀಯ ಅರಣ್ಯ ಸೇವೆಗೆ ಸೇರಿದ ಅಧಿಕಾರಿಗಳು ನಿಯೋಜನೆ ಮೇಲೆ ನಿಗಮ / ಮಂಡಳಿಗಳು / ವಿಶ್ವವಿದ್ಯಾಲಯ ಮತ್ತಿತರೆಡೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರು ಅಲ್ಲಿನ ಮುಖ್ಯಸ್ಥರುಗಳಿಂದ ರಜೆ ಮಂಜೂರು ಮಾಡಿಸಿಕೊಳ್ಳುವುದೋ ಅಥವಾ ಸರ್ಕಾರಕ್ಕೆ ರಜೆಯ ಮೇಲೆ ತೆರಳುವ ಮುನ್ನಾ ದಿನದಂದೋ ಬರೆದು, ರಜೆ ಉಪಯೋಗಿಸಿಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಸರ್ಕಾರದಿಂದ ರಜೆ ಮಂಜೂರು ಮಾಡಿಸಿಕೊಳ್ಳದೆ, ಘಟನೋತ್ತರವಾಗಿ ರಜೆ ಮಂಜೂರಾತಿಗಾಗಿ ಕೋರುತ್ತಿರುವುದರಿಂದ ಸರ್ಕಾರಕ್ಕೆ ಮುಜಗರದ ಪರಿಸ್ಥಿತಿ ಉಂಟಾಗುತ್ತಿದೆ. ಅದ್ದರಿಂದ ಇನ್ನು ಮುಂದೆ ನಿಗಮ / ಮಂಡಳಿ / ವಿಶ್ವವಿದ್ಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಭಾರತೀಯ ಅರಣ್ಯ ಸೇವಾ ಅಧಿಕಾರಿಗಳು ಸರ್ಕಾರಕ್ಕೆ ಹದಿನೈದು ದಿನಗಳ ಮುಂಚಿತವಾಗಿ ರಜೆ ಅರ್ಜಿಯನ್ನು ಸಲ್ಲಿಸಿ, ರಜೆ ಮಂಜೂರು ಮಾಡಿಸಿಕೊಂಡ ನಂತರವೇ ರಜೆಯ ಮೇಲೆ ತೆರಳತಕ್ಕದೆಂದು ಈ ಮೂಲಕ ಸೂಚಿಸಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ತುಷಾರ್ ಗಿರಿ ನಾಥ್**

ಪಿ.ಆರ್. 1966 ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು.ಇ. (ಸೇವೆಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಲೋಕ ಸೇವಾ ಆಯೋಗದ ಕಛೇರಿಗೆ 4 ಹೆಚ್ಚುವರಿ ಶೀಘ್ರಲಿಪಿಗಾರರ ಹುದ್ದೆಗಳನ್ನು ಸೃಜಿಸಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 47 ಎಸ್‌ಎಸ್‌ಸಿ 2006, ದಿನಾಂಕ 27–7–2006

**2.** ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 90 ಸೇಲೋಸೇ 2006, ದಿನಾಂಕ 11–1–2007

**3.** ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಆ.793/2007–08/ಪಿಎಸ್‌ಸಿ, ದಿನಾಂಕ 23–7–2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿರುವ ದಿನಾಂಕ 27–7–2006ರ ಅಧಿಸೂಚನೆಯಲ್ಲಿ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಒಬ್ಬರು ಹೆಚ್ಚುವರಿ ಸದಸ್ಯರನ್ನು ಸೃಜಿಸಲಾಗಿದೆ. ಉಲ್ಲೇಖ (2)ರಲ್ಲಿನ ದಿನಾಂಕ 11–1–2007ರ ಸರ್ಕಾರಿ ಆದೇಶದಲ್ಲಿ ಇನ್ನಿತರ ಹುದ್ದೆಗಳೊಂದಿಗೆ, ಗ್ರೂಪ್–ಎ ಸಮೂಹಕ್ಕೆ ಸೇರಿದ ಒಂದು ಸಹ ಕಾರ್ಯದರ್ಶಿ ಹಾಗೂ ಎರಡು ಉಪ ಕಾರ್ಯದರ್ಶಿಗಳ ಹೆಚ್ಚುವರಿ ಹುದ್ದೆಗಳನ್ನು ಸೃಜಿಸಲಾಗಿದೆ. ಈ ಹುದ್ದೆಗಳಿಗೆ ಆಪ್ತ ಸಹಾಯಕರ ಸೌಲಭ್ಯವಿದ್ದು, ಅದಕ್ಕಾಗಿ 4 ಶೀಘ್ರಲಿಪಿಗಾರರ ಹುದ್ದೆಗಳನ್ನು ಶೀಘ್ರವಾಗಿ ಸೃಜಿಸುವಂತೆ ಕರ್ನಾಟಕ ಲೋಕ ಸೇವಾ ಆಯೋಗವು ಉಲ್ಲೇಖ (3)ರಲ್ಲಿನ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತದೆ. ಸರ್ಕಾರವು ಆಯೋಗದ ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 62 ಸೇಲೋಸೇ 2007, ಬೆಂಗಳೂರು, ದಿನಾಂಕ 17ನೇ ಅಕ್ಟೋಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ನಾಲ್ಕು ಶೀಘ್ರಲಿಪಿಗಾರರ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1663 ವೆಚ್ಚ 5/2007, ದಿನಾಂಕ 28–9–2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–1).

ಪಿ.ಆರ್. 1965

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಜೆ.ಟಿ. ಅಜ್ಜಪ್ಪ, ಎಸಿಪಿ, ವಿಧಾನಸೌಧ ಉಪ ವಿಭಾಗ, ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ41/2007, ದಿನಾಂಕ 6–11–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 394 ಪೊಸಿಪ 2007, ಬೆಂಗಳೂರು, ದಿನಾಂಕ 19ನೇ ಡಿಸೆಂಬರ್, 2007**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಜೆ.ಟಿ. ಅಜ್ಜಪ್ಪ, ಎಸಿಪಿ, ವಿಧಾನಸೌಧ ಉಪ ವಿಭಾಗ, ಬೆಂಗಳೂರು ಇವರ ವಿರುದ್ಧ ಮಾಡಲಾದ ಕರ್ತವ್ಯಲೋಪ, ದುರ್ನಡತೆ, ಅಧಿಕಾರದ ದುರುಪಯೋಗ ಈ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ಮೇಲೆ (1)ರಲ್ಲಿ ಓದಲಾದ ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡು ಬಂದಿರುವುದರಿಂದ ಈ ಪ್ರಾಥಮಿಕ ವರದಿಯ ಆಧಾರದ ಮೇಲೆ ಇವರು ಸುಗಮ ತನಿಖೆಗೆ ಅಡ್ಡಿಪಡಿಸಬಹುದಾದ ಹಾಗೂ ದಾಖಲೆ / ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತು ಗೊಳಿಸುವುದು ಅವಶ್ಯಕವೆಂದು ಸರ್ಕಾರವು ಭಾವಿಸಿರುವುದರಿಂದ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜೆ.ಡಿ. ಅಜ್ಜಪ್ಪ ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಜೆ.ಟಿ. ಅಜ್ಜಪ್ಪ, ಎಸಿಪಿರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಜೆ.ಟಿ. ಅಜ್ಜಪ್ಪ, ಎಸಿಪಿರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. 2220

## ಶಿಕ್ಷಣ ಸಚಿವಾಲಯ

**ವಿಷಯ:** 2007–08ನೇ ಸಾಲಿಗೆ ತುಮಕೂರು ವಿಶ್ವವಿದ್ಯಾಲಯ ತುಮಕೂರು ಇವರಿಗೆ ಅಭಿವೃದ್ಧಿ ಅನುದಾನ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಇಡಿ 123: ಯೋಯೋಕ 2007, ಬೆಂಗಳೂರು, ದಿನಾಂಕ: 03–05–2007.

2 ಹಣಕಾಸು ಅಧಿಕಾರಿಗಳು, ತುಮಕೂರು ವಿಶ್ವ ವಿದ್ಯಾಲಯ, ತುಮಕೂರು ರವರ ಪತ್ರ ಸಂಖ್ಯೆ ತುವಿ: ಹವಿ: 01:164:2007–08 ದಿನಾಂಕ: 17–04–2007.

**ಪ್ರಸ್ತಾವನೆ:**

(1) ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2007–08ನೇ ಸಾಲಿನ ಮುಂದುವರಿಕೆ ಕಾರ್ಯಕ್ರಮದಡಿ ಲೆಕ್ಕ ಶೀರ್ಷಿಕೆ 2202–03–102–0–09 ರಡಿ ಹೊಸ ವಿಶ್ವವಿದ್ಯಾಲಯಗಳ ಸ್ಥಾಪನೆ (ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವೂ ಸೇರಿದಂತೆ) ಕಾರ್ಯಕ್ರಮಕ್ಕೆ 255.00 ಲಕ್ಷ ರೂಗಳಿಗೆ ಅನುಮೋದನೆ ನೀಡಲಾಗಿದೆ.

(2) ಮೇಲೆ ಓದಲಾದ (2) ರಲ್ಲಿನ ಹಣಕಾಸು ಅಧಿಕಾರಿಗಳು, ತುಮಕೂರು ವಿಶ್ವವಿದ್ಯಾಲಯ, ತುಮಕೂರುರವರ ಪತ್ರದಲ್ಲಿ 2007–08ನೇ ಸಾಲಿಗೆ ಮೊದಲನೇ ಕಂತಿನ ಅಭಿವೃದ್ಧಿ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 123: ಯೋಯೋಕ 2007 ಬೆಂಗಳೂರು, ದಿ: 25–08–2007 [ಇಡಿ: 126: ಸ್ಕೀಮರ (ಯುನಿಕ್) 2007, ದಿನಾಂಕ: 25–08–2007]**

(4) 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–03–102–0–09 ರಡಿ ಹೊಸ ವಿಶ್ವವಿದ್ಯಾಲಯಗಳ ಸ್ಥಾಪನೆ (ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವ ವಿದ್ಯಾಲಯವೂ ಸೇರಿದಂತೆ) ಕಾರ್ಯಕ್ರಮಕ್ಕೆ ಒದಗಿಸಲಾದ 255.00 ಲಕ್ಷ ರೂಗಳಲ್ಲಿ (ಇನ್ನೂರಾಐವತ್ತೈದು ಲಕ್ಷ ರೂಪಾಯಿಗಳು ಮಾತ್ರ) 1245.00 ಲಕ್ಷ ರೂಗಳನ್ನು (ಇನ್ನೂರಾ ನಲವತ್ತೈದು ಲಕ್ಷ ರೂಪಾಯಿಗಳು ಮಾತ್ರ) ತುಮಕೂರು ವಿಶ್ವವಿದ್ಯಾಲಯಗಳ ಅಭಿವೃದ್ಧಿಗಾಗಿ ಮತ್ತು 10.00 ಲಕ್ಷ ರೂಗಳನ್ನು (ಹತ್ತು ಲಕ್ಷ ರೂಪಾಯಿಗಳು ಮಾತ್ರ) ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯಕ್ಕೆ ಹಂಚಿಕೆ ಮಾಡಲಾಗಿದೆ. ಸರ್ಕಾರದ ಆದೇಶ ಸಂಖ್ಯೆ ಇಡಿ 123 ಯೋಯೋಕ 2007 ದಿನಾಂಕ: 03–05–2007ರಲ್ಲಿನ ಎಲ್ಲಾ ಅಂಶಗಳೂ ಹಾಗೂ ಷರತ್ತುಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1538

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** "ನಮ್ಮ ಭೂಮಿ–ನಮ್ಮ ತೋಟ" ಯೋಜನೆಯ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1 ಸರ್ಕಾರದ ಆದೇಶ ಸಮಸಂಖ್ಯೆ ಗ್ರಾಅಪ 5 ಸ್ವಉಕಾ 2005 ಬೆಂಗಳೂರು ದಿನಾಂಕ 1–4–2006.

2 ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 1 ಸ್ವಉಕಾ 2006 ಬೆಂಗಳೂರು ದಿನಾಂಕ: 18–05–2006.

3 ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 1 ಸ್ವಉಕಾ 2006 ಬೆಂಗಳೂರು ದಿನಾಂಕ 23–02–2007.

**ಪ್ರಸ್ತಾವನೆ:**

ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಸಮಸ್ತ ಭೂರಹಿತ ಕೃಷಿ ಕಾರ್ಮಿಕರ ಸಾಮಾಜಿಕ ಆರ್ಥಿಕ ವಿಕಾಸಕ್ಕೆ ಹಾಗೂ ಅವರ ಜೀವನ ಮಟ್ಟವನ್ನು ಸುಧಾರಿಸುವುದಕ್ಕಾಗಿ "ನಮ್ಮ ಭೂಮಿ–ನಮ್ಮ ತೋಟ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಕ್ಕೆ ಜಾರಿಗೊಳಿಸಲಾಗಿದೆ. ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸಚಿವ ಸಂಪುಟವು ದಿನಾಂಕ 15–9–2005ರಂದು ಅನುಮೋದನೆಯನ್ನು ನೀಡಿದೆ. ಸರ್ಕಾರದ ಆದೇಶ ಉಲ್ಲೇಖ (1)ರಲ್ಲಿ ಈ ಯೋಜನೆಯನ್ನು 2006–07ನೇ ಸಾಲಿಗೆ ರಾಜ್ಯ ಸರ್ಕಾರವು ಈ ಯೋಜನೆಗೆ ನಿಗದಿಪಡಿಸಬಹುದಾದ ಅನುದಾನದ ಹಂಚಿಕೆ ಮತ್ತು ವಿಧಿಸಬಹುದಾದ ನಿಭಂದನೆಗೊಳಪಟ್ಟು ಮುಂದುವರಿಸಲಾಗಿದೆ. ಉಲ್ಲೇಖ (2)ರಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಆರ್ಥಿಕ ಮತ್ತು ಭೌತಿಕ ಗುರಿಗಳನ್ನು ನಿಗದಿಪಡಿಸಿ ಹಂಚಿಕೆ ಮಾಡಲಾಗಿದೆ. ಅದರಂತೆ ನಿಗದಿಪಡಿಸಲಾದ

ಹಂಚಿಕೆಯ ಅನುದಾನದಲ್ಲಿ ಮೂರನೇ ಒಂದು ಭಾಗವನ್ನು ಮೊದಲನೆ ಕಂತಾಗಿ ರಾಜ್ಯದ 22 ಜಿಲ್ಲಾ ಪಂಚಾಯಿತಿಗಳಿಗೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಉಲ್ಲೇಖ (3)ರಲ್ಲಿ ನಿಗದಿಪಡಿಸಿದ ಅನುದಾನದಲ್ಲಿ 2ನೇ ಕಂತಿನ ಅನುದಾನವನ್ನು (ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಉಡುಪಿ, ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳು ಹೊರತುಪಡಿಸಿ) ಒಟ್ಟು 22 ಜಿಲ್ಲೆಗಳಿಗೆ ಅನುದಾನ ಬಿಡುಗಡೆ ಮಾಡಲಾಗಿದೆ. ಉಳಿದಂತೆ 2006–07ನೇ ಸಾಲಿನ ಅಂತಿಮ 3ನೇ ಕಂತಿನ ಅನುದಾನದಲ್ಲಿ ದಕ್ಷಿಣ ಕನ್ನಡ, ಉಡುಪಿ ಮತ್ತು ಕೊಡಗು ಜಿಲ್ಲೆಗಳ ಬಾಕಿ ಅನುದಾನವು ಸೇರಿ ಒಟ್ಟು 25 ಜಿಲ್ಲೆಗಳಿಗೆ ಅಂತಿಮ ಕಂತು ಬಿಡುಗಡೆ ಮಾಡಬೇಕಾಗಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 1 ಸ್ವಉಕಾ 2006, ಬೆಂಗಳೂರು, ದಿನಾಂಕ: 21ನೇ ಮಾರ್ಚ್ 2007.**

1. ಪ್ರಸ್ತಾವನೆಯಲ್ಲಿ ವಿವರಿಸಿದಂತೆ "ನಮ್ಮ ಭೂಮಿ – ನಮ್ಮ ತೋಟ" ಎಂಬ ಯೋಜನೆಯನ್ನು ರಾಜ್ಯದ ಜಿಲ್ಲಾ ಪಂಚಾಯತ್‌ಗಳ ಗ್ರಾಮೀಣ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಲು ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾ–ಧಿಕಾರಿಗಳಿಗೆ (ಬೆಂಗಳೂರು ಗ್ರಾಮಾಂತರ ಬೆಂಗಳೂರು ನಗರ ಹೊರತುಪಡಿಸಿ) ಲಗತ್ತಿಸಿದ ಅನುಬಂಧದಲ್ಲಿ ನಮೂದಿಸಿದಂತೆ ಒಟ್ಟು ರೂ. 6,90,53,180–00ಗಳನ್ನು (ರೂ ಆರು ಕೋಟಿ ತೊಂಬತ್ತು ಲಕ್ಷದ ಐವತ್ತ ಮೂರು ಸಾವಿರದ ಒಂದು ನೂರ ಎಂಬತ್ತು ಮಾತ್ರ) ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಸರ್ಕಾರವು ಹರ್ಷಿಸುತ್ತದೆ.

1. ಅತೀ ಹೆಚ್ಚು ಭೂರಹಿತ ಕೃಷಿ ಕಾರ್ಮಿಕರ ಕುಟುಂಬಗಳು ಇರುವಂತಹ ಗ್ರಾಮ ಪಂಚಾಯತ್‌ಗಳನ್ನು ಆಧ್ಯತೆಯ ಮೇಲೆ ಆಯ್ಕೆ ಮಾಡುವುದು.
2. ನಿಗದಿಪಡಿಸಿದ ಭೌತಿಕ ಮತ್ತು ಆರ್ಥಿಕ ಗುರಿಯಂತೆ ಯಾವುದೆ ಕಾರಣಕ್ಕೂ ಮೀರದಂತೆ, ಸಾಧನೆ ಮಾಡುವುದು.
3. ಯೊಜನೆಯ ಅನುಷ್ಠಾನಕ್ಕೆ ಆಯ್ಕೆಯಾದ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಜಮೀನು ಖರೀದಿಗೆ ಸುಲಭವಾಗಿ ದೊರೆಯುವಂತಿರಬೇಕು.
4. ಫಲವತ್ತಾದ ಜಮೀನಿನ ಲಭ್ಯತಾನುಸಾರ ಖರೀದಿ ಮೊತ್ತ ಪ್ರತಿ ಫಲಾನುಭವಿಗೆ ರೂ 6000–00ಗಳಿಗೆ ಮೀರದಂತೆ, ಕ್ರಮ ಜರುಗಿಸುವುದು.
5. ಸದರಿ ಆಯ್ದ ಗ್ರಾಮ ಪಂಚಾಯತ್‌ಗಳಲ್ಲಿ ಗ್ರಾಮ ಪಂಚಾಯತ್ ಯೋಜನೆಗೆ ಹೊರಡಿಸಲಾದ ಸರ್ಕಾರಿ ಸುತ್ತೋಲೆ ಮತ್ತು ಮಾರ್ಗ ಸೂಚಿಗಳ ಪ್ರಕಾರ ಅನುಷ್ಠಾನಕ್ಕೆ ಕ್ರಮಕೈಗೊಳ್ಳುವುದು.
6. 2006–07ರ ಮಾರ್ಚ್ ಅಂತ್ಯದೊಳಗೆ, ಪ್ರಾಥಮಿಕ ಎಲ್ಲಾ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಿ, (ಫಲಾನುಭವಿಗಳ ಆಯ್ಕೆ ಮತ್ತು ಭೂಮಿ ಖರೀದಿ ಸೇರಿದಂತೆ) ಫಲಾನುಭವಿಗಳಿಗೆ ಭೂಮಿಯನ್ನು ನೀಡುವ ಪ್ರಕ್ರಿಯೆಗೆ ಚಾಲನೆ ನೀಡುವುದು.
7. ಪ್ರಸ್ತುತ ವರ್ಷದಲ್ಲಿ ಬಿಡುಗಡೆಯಾದ ಅನುದಾನವನ್ನು ಮಾರ್ಚ್ 2007 ರೊಳಗೆ ಸಂಪೂರ್ಣವಾಗಿ ಯೋಜನೆಗೆ ಬಳಸಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.
8. ಮಾರ್ಗಸೂಚಿಯಲ್ಲಿ ತಿಳಿಸಿದ ರೀತ್ಯ ಮೂರು ಹಂತಗಳಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ವಿವಿಧ ಸಮಿತಿಗಳನ್ನು ಸಕಾಲದಲ್ಲಿ ರಚಿಸಿ, ಯೋಜನೆಯ ಅನುಷ್ಠಾನಕ್ಕೆ ಮಾರ್ಗದರ್ಶನ ನೀಡುವಂತೆ ಹಾಗೂ ಅನುಷ್ಠಾನಾಧಿಕಾರಿಗಳಿಗೆ ನೆರವಾಗುವಂತೆ ಮತ್ತು ತಾಂತ್ರಿಕ ಸಲಹೆಗಳನ್ನು ನೀಡುವಂತೆ, ಕಾರ್ಯನಿರ್ವಹಣೆಗೆ ಬರಲು ಕ್ರಮ ಜರುಗಿಸುವುದು.
9. ನಿಗಧಿಪಡಿಸಿದ ಭೌತಿಕ ಗುರಿಗೆ ಅನುಗುಣವಾಗಿ ಆಯ್ದ ಗ್ರಾಮ ಪಂಚಾಯತ್‌ಗಳಲ್ಲಿ ಗ್ರಾಮಗಳು ಮತ್ತು ಫಲಾನುಭವಿಗಳ ಹೆಸರು ಮುಂತಾದ ವಿವರಗಳನ್ನು ಕೂಡಲೇ ಸರ್ಕಾರಕ್ಕೆ ಸಲ್ಲಿಸುವುದು.
10. ಇಂತಹ ಸೌಲಭ್ಯವನ್ನು ಇತರೆ ಯೋಜನೆಗಳನ್ನು ಪಡೆದಿದ್ದಲ್ಲಿ, ಅಂತಹ ಫಲಾನುಭವಿಗಳಿಗೆ ಈ ಯೋಜನೆಯ ಪ್ರಯೋಜನವನ್ನು ನೀಡಬಾರದು. ಯಾವುದೇ ಸಂದರ್ಭದಲ್ಲಿ ಎರಡು ಅಥವಾ ಹೆಚ್ಚು ಕಾರ್ಯಕ್ರಮಗಳಲ್ಲಿ ಪ್ರಯೋಜನಗಳನ್ನು ಪಡೆಯದಂತೆ ನೋಡಿಕೊಳ್ಳುವುದು.

2. ಬಿಡುಗಡೆಯಾದ ಅನುದಾನವನ್ನು ಗ್ರಾಮಪಂಚಾಯ್‌ಗಳಿಗೆ ಹದಿನೈದು ದಿನಗಳೊಳಗಾಗಿ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಬಿಡುಗಡೆ ಮಾಡುವುದು.

3. ಅನುದಾನದ ವೆಚ್ಚವನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

2515–ಇತರೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು–00–101 ಸಹಾಯಕ ಅನುದಾನ–0–23–ನಮ್ಮ ಹೊಲ ನಮ್ಮ ತೋಟ–059 ಇತರೆ ಖರ್ಚು (ಯೋಜನೆ) (2515–00–101–0–23–059)

ಬಿಡುಗಡೆಯಾದ ಅನುದಾನವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 7 ಜಡ್‌ಪಿಎ 2003 ದಿನಾಂಕ 14–07–2005 ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ ಆಇ–1 ಜಿಪಅ 07 ದಿನಾಂಕ 19–1–2007 ರನ್ವಯ ಖಜಾನೆಯಿಂದ ಅನುದಾನ ಪಡೆದು ಯೋಜನೆಯ ರೂಪುರೇಶಗಳ ಕಂಡಿಕೆ 6.7ರ ಅನ್ವಯ ವೆಚ್ಚದ ನಿರ್ವಹಣೆಯನ್ನು ಮಾಡುವುದು.

4. ಈ ಯೋಜನೆಯನ್ನು ಗ್ರಾಮ ಪಂಚಾಯತ್‌ಗಳ ಮೂಲಕವೇ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಶಾಂತರಾಜ್**

ನಿರ್ದೇಶಕರು (ಸ್ವಉಕಾ) ಹಾಗೂ

ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ANNEXURE**

**Statement showing the release of funds to Zilla Panchayats under "Namma Bhoomi Namma Thota" Scheme G.O. No. RDP/1/SEP/2006 Bangalore Dated: 03-2007**

(in Rs. Lakhs)

| Sl. No. | District | No. of Agricultural Labourers | Approxi-mate No. of Landless agricultural labourers out of Col.3 | Physical target No. of landless labourers to be covered during 2006-07 | Allocation of funds | Amount already released as 1st installment vide G.O. No. RDP/ 1/ SEP/2 006 dt: 18-05-06 | Amount already released as list install-ment vide G.O. No. RDP/ 1/ SEP/2 006 dt: 23.2.07 | Funds released now as IIIrd install-ment |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1. | Bagalkot | 272817 | 21910 | 1402 | 8760000 | 2890800 | 2890800 | 2890800 |
| 2. | Belgaum | 587476 | 47170 | 3014 | 18870000 | 7192350 | 7192350 | 7192350 |
| 3. | Bellary | 361433 | 29018 | 1856 | 11609000 | 3830640 | 3830640 | 3830640 |
| 4. | Bidar | 209047 | 16784 | 1075 | 6714000 | 2215620 | 2215620 | 2215620 |
| 5. | Bijapur | 286739 | 23025 | 1472 | 9210000 | 3039300 | 3039300 | 3039300 |
| 6. | C. dugra | 241444 | 19400 | 1250 | 6199000 | 2045340 | 2045340 | 2045340 |
| 7. | C. magalur | 109037 | 8760 | 561 | 3503000 | 1156320 | 1156320 | 1156320 |
| 8. | C.R. Nagar | 192978 | 15500 | 992 | 7755000 | 2558820 | 2558820 | 2558820 |
| 9. | D. Kannada | 42566 | 3425 | 218 | 1367000 | - | - | 1367000 |
| 10. | Davangere | 270703 | 21700 | 1390 | 8694000 | 2869680 | 2869680 | 2869680 |
| 11. | Dharwad | 186543 | 14980 | 954 | 5991000 | 2472360 | 2472360 | 2472360 |
| 12. | Gadag | 179595 | 14425 | 922 | 5768000 | 2754180 | 2754180 | 2754180 |
| 13. | Gulbarga | 539561 | 43319 | 2771 | 17330000 | 5718900 | 5718900 | 5718900 |
| 14. | Hassan | 126659 | 10170 | 653 | 4068000 | 1342440 | 1342440 | 1342440 |
| 15. | Haveri | 291275 | 23390 | 1498 | 9355000 | 3417810 | 3417810 | 3417810 |
| 16. | Kodagu | 11479 | 920 | 58 | 370000 | - | - | 370000 |
| 17. | Kolar | 337971 | 27140 | 1740 | 10855000 | 3582480 | 3582480 | 3582480 |
| 18. | Koppal | 234992 | 18861 | 1210 | 7548000 | 2490840 | 2490840 | 2490840 |
| 19. | Mandya | 206111 | 16550 | 1056 | 6620000 | 2184600 | 2184600 | 2184600 |
| 20. | Mysore | 250362 | 20100 | 1286 | 8041000 | 2653200 | 2653200 | 2653200 |
| 21. | Raichur | 328491 | 26369 | 1683 | 10551000 | 3482160 | 3482160 | 3482160 |
| 22. | Shimoga | 224124 | 18000 | 1152 | 7199000 | 2376000 | 2376000 | 2376000 |
| 23. | Tumkur | 313906 | 25225 | 1612 | 10082000 | 3327060 | 3327060 | 3327060 |
| 24. | U. Kannada | 84573 | 6784 | 435 | 2716000 | 896280 | 896280 | 896280 |
| 25. | Udupi | 87761 | 7050 | 450 | 2819000 | - | - | 2819000 |
| | **Total** | **5977643** | **479975** | **30710** | **187438000** | **64497180** | **64497180** | **69053180** |

**ಆರ್. ಶಾಂತರಾಜ್**

ನಿರ್ದೇಶಕರು (ಸ್ವಉಕಾ) ಹಾಗೂ

ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್.535

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಒಇ 401 ಪೊಸಿಪ 2006, ಬೆಂಗಳೂರು, ದಿನಾಂಕ: 21–08–2007**

ಸರ್ಕಾರದ ಆದೇಶ ಸಂಖ್ಯೆ: ಒಇ 401 ಪೊಸಿಪ 2006 ದಿನಾಂಕ 27–07–2007ರ ಆದೇಶದ ಭಾಗದ 5ನೇ ಸಾಲಿನಲ್ಲಿ "ಸದರಿ ಇಲಾಖಾ ವಿಚಾರಣೆಯನ್ನು ನಡೆಸಲು ಡಿವೈ.ಎಸ್.ಪಿ. ಸಿ.ಎ.ಆರ್ (ದಕ್ಷಿಣ)" ಎಂಬುದರ ಬದಲಾಗಿ "ಸದರಿ ಇಲಾಖಾ ವಿಚಾರಣೆಯನ್ನು ನಡೆಸಲು ಡೆಪ್ಯುಟಿ ಕಮೀಷನರ್ ಆಫ್ ಪೊಲೀಸ್, ಸಿ.ಎ.ಆರ್. (ದಕ್ಷಿಣ) ಬೆಂಗಳೂರು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1537

**ಆರ್.ಎ. ಕುಲಕರ್ಣಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಕಂದಾಯ ಸಚಿವಾಲಯ**

**ವಿಷಯ:** ಹೊಸದಾಗಿ ರಚಿಸಲಾಗಿರುವ ರಾಮನಗರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳ ಕಾರ್ಯಾರಂಭಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರದ ಪ್ರಾಥಮಿಕ ಅಧಿಸೂಚನೆ ಸಂ.ಕಂಇ 27 ಭೂದಾಪು 2006 (ಭಾಗ–3) ದಿನಾಂಕ: 27–6–2007.

2 ಸರ್ಕಾರದ ಅಂತಿಮ ಅಧಿಸೂಚನೆ ಸಂ.ಕಂ.ಇ 27 ಭೂದಾಪು 2006 (ಭಾಗ–3) ದಿನಾಂಕ: 3–8–2007 ಮತ್ತು 17–8–2007.

3. ಸರ್ಕಾರದ ಆದೇಶ ಸಂ. ಆರ್.ಡಿ. 27 ಭೂದಾಪು 2006 ದಿನಾಂಕ: 21–6–2007.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರಲ್ಲಿ ಹೊಸದಾಗಿ ರಾಮನಗರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳನ್ನು ರಚಿಸಿ ದಿನಾಂಕ: 27–6–2007 ಹಾಗೂ ದಿನಾಂಕ: 3–8–2007 ಮತ್ತು 17–8–2007 ರಲ್ಲಿ ಪ್ರಾಥಮಿಕ ಹಾಗೂ ಅಂತಿಮ ಅಧಿಸೂಚನೆಗಳನ್ನು ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (3)ರ ದಿನಾಂಕ: 21–6–2007ರ ಸರ್ಕಾರಿ ಆದೇಶದಲ್ಲಿ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಜಿಲ್ಲಾಧಿಕಾರಿಗಳನ್ನು ನೇಮಕ ಮಾಡಲಾಗಿರುತ್ತದೆ.

ಹೊಸ ಜಿಲ್ಲೆಗಳಾದ ರಾಮನಗರ ಮತ್ತು ಚಿಕ್ಕಬಳ್ಳಾಪುರಗಳು ಆಡಳಿತಾತ್ಮಕ ಪ್ರಕ್ರಿಯೆಯನ್ನು ಪ್ರಾರಂಭಿಸಲು 2007–08ರ ಪೂರಕ ಅಂದಾಜಿನಲ್ಲಿ ಒಟ್ಟಾರೆ 53.00 ಕೋಟಿ ರೂ.ಗಳನ್ನು ಒದಗಿಸಲಾಗಿರುತ್ತದೆ.

ಪ್ರಸ್ತುತ ರಾಮನಗರ ಮತ್ತು ಚಿಕ್ಕಬಳ್ಳಾಪುರ ಹೊಸ ಜಿಲ್ಲೆಗಳು ದಿನಾಂಕ: 23–8–2007ರಿಂದ ಅಸ್ತಿತ್ವದಲ್ಲಿ ಬರಲಿರುವ ಹಿನ್ನೆಲೆಯಲ್ಲಿ ಆಡಳಿತಾತ್ಮಕ ಪ್ರಕ್ರಿಯೆಯನ್ನು ಪ್ರಾರಂಭಿಸಲು ಪ್ರತಿ ಜಿಲ್ಲೆಗೆ 6.00 ಕೋಟಿ ರೂ.ಗಳಂತೆ ಒಟ್ಟಾರೆ 12.00 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 41 ಭೂದಾಪು 2007 ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2007**

ಸರ್ಕಾರವು ರಾಮನಗರ ಮತ್ತು ಚಿಕ್ಕಬಳ್ಳಾಪುರ ಹೊಸ ಜಿಲ್ಲೆಗಳಿಗೆ ಅವಶ್ಯಕವಾದ ಆಡಳಿತಾತ್ಮಕ ಪ್ರಕ್ರಿಯೆಯನ್ನು ಪ್ರಾರಂಭಿಸಲು ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಜಿಲ್ಲಾಧಿಕಾರಿ, ರಾಮನಗರರವರಿಗೆ 6.00 ಕೋಟಿ (ಆರು ಕೋಟಿ ರೂಪಾಯಿಗಳು ಮಾತ್ರ) ಹಾಗೂ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಜಿಲ್ಲಾಧಿಕಾರಿ, ಚಿಕ್ಕಬಳ್ಳಾಪುರರವರಿಗೆ 6.00 (ಆರು ಕೋಟಿ ರೂಪಾಯಿಗಳು ಮಾತ್ರ) ಹೀಗೆ ಒಟ್ಟಾರೆ 12.00 ಕೋಟಿ ರೂ.ಗಳನ್ನು (ಹನ್ನೆರಡು ಕೋಟಿ ರೂ.ಗಳು ಮಾತ್ರ) ಬಿಡುಗಡೆ ಮಾಡಿ ಆದೇಶಿಸಿದೆ.

ಸದರಿ ವೆಚ್ಚವನ್ನು 2007–08ನೇ ಸಾಲಿನ ಪೂರಕ ಅಂದಾಜು ಲೆಕ್ಕ ಶೀರ್ಷಿಕೆ 2053–00–800–0–05–059– ಇತರೆ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂ. ಆಇ 903 ವೆಚ್ಚ–7/2007 ದಿನಾಂಕ: 17–8–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1541

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಮಧುಗಿರಿಯಲ್ಲಿರುವ ರೇಷ್ಮೆ ಗೂಡಿನ ಮಾರುಕಟ್ಟೆ ಕಟ್ಟಡವನ್ನು ಸಮಾಜ ಕಲ್ಯಾಣ ಇಲಾಖೆಗೆ ತಾತ್ಕಾಲಿಕವಾಗಿ ನೀಡುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ರೇನಿ/ಗೂಮಾ/ಮ/ಕಟ್ಟಡ/26/06-07, ದಿನಾಂಕ: 13–9–2006, 22–2–2007 ಮತ್ತು 18–4–2007.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮಧುಗಿರಿಯಲ್ಲಿರುವ ರೇಷ್ಮೆಗೂಡಿನ ಮಾರುಕಟ್ಟೆ ಕಟ್ಟಡವು ಮಾರುಕಟ್ಟೆಯನ್ನು 2000–2001ನೇ ಸಾಲಿನಲ್ಲಿ ನಿರ್ಮಿಸಿದ್ದು, ಈ ಕಟ್ಟಡದಲ್ಲಿ ಮಾರುಕಟ್ಟೆಯನ್ನು ಪ್ರಾರಂಭ ಮಾಡಿರುವುದಿಲ್ಲ. ಈ ಪ್ರಾಂತ್ಯದಲ್ಲಿ ನೂಲು ಬಿಚ್ಚುವ ಕಾರ್ಯವು ಅಭಿವೃದ್ಧಿ ಆಗದ ಕಾರಣ ಮಾರುಕಟ್ಟೆಯನ್ನು ಪ್ರಾರಂಭ ಮಾಡುವುದು ಸೂಕ್ತವಲ್ಲವಾದ್ದರಿಂದ ಈ ಕಟ್ಟಡವು ಕಳೆದ 5 ವರ್ಷದಿಂದ ಬಳಕೆಯಾಗದೇ ಇರುವುದಾಗಿ ತಿಳಿಸಿ ಮಧುಗಿರಿ ತಾಲ್ಲೂಕು ಪಂಚಾಯಿತಿಯು ದಿ: 3–8–2006ರ ಸಾಮಾನ್ಯ ಸಭೆಯಲ್ಲಿ ಮತ್ತು ಕೆಡಿಪಿ ದಿನಾಂಕ: 5–8–2006ರ ಸಬೆಯಲ್ಲಿ ಈ ಕಟ್ಟಡವನ್ನು ಸಮಾಜ ಕಲ್ಯಾಣ ಇಲಾಖೆಗೆ ವಿದ್ಯಾರ್ಥಿಗಳ ವಸತಿ ನಿಲಯಗಳ ಸೌಲಭ್ಯಕ್ಕಾಗಿ ತಾತ್ಕಾಲಿವಾಗಿ ನೀಡಲು ತೀರ್ಮಾನವಾಗಿರುತ್ತದೆ ಎಂದು ತಿಳಿಸಿರುತ್ತಾರೆ ಮತ್ತು ಕಟ್ಟಡದ ಸುರಕ್ಷತೆ ಮತ್ತು ಸದ್ಬಳಕೆಯ ದೃಷ್ಟಿಯಿಂದ ಸರ್ವೆ ನಂ. 15 ಪಾಳ್ಯದ ಹಳ್ಳಿಯಲ್ಲಿರುವ 941 ಚ.ಮೀ ವಿಸ್ತೀರ್ಣದ ಕಟ್ಟಡಗಳನ್ನು ಅಗತ್ಯವಿರುವ ತಾಲ್ಲೂಕು ಸಮಾಜ ಕಲ್ಯಾಣ ಇಲಾಖೆಗೆ ವಿದ್ಯಾರ್ಥಿಗಳ ವಸತಿ ಗೃಹ ಸ್ಥಾಪನೆ ಮಾಡಲು ತಾತ್ಕಾಲಿಕವಾಗಿ ಕೆಲವು ಷರತ್ತುಗಳನ್ವಯ ನೀಡಬಹುದಾಗಿದೆ ಎಂದು ತಿಳಿಸಿ ಈ ಬಗ್ಗೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮಧುಗಿರಿಯಲ್ಲಿರುವ ರೇಷ್ಮೆಗೂಡು ಮಾರುಕಟ್ಟೆ ಕಟ್ಟಡವನ್ನು ಸಮಾಜಕಲ್ಯಾಣ ಇಲಾಖೆಗೆ ತಾತ್ಕಾಲಿಕವಾಗಿ ನೀಡಬಹುದಾಗಿದೆ ಎಂದು ವರದಿ ಮಾಡಿರುವ ಹಿನ್ನಲೆಯಲ್ಲಿ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದ್ದು, ರೇಷ್ಮೆ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ಮಧುಗಿರಿಯಲ್ಲಿರುವ ರೇಷ್ಮೆ ಇಲಾಖೆಯ ಕಟ್ಟಡಗಳನ್ನು ಸಮಾಜ ಕಲ್ಯಾಣ ಇಲಾಖೆಗೆ ನೀಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 32 ರೇಯೋವಿ 2006, ಬೆಂಗಳೂರು, ದಿನಾಂಕ: 13ನೇ ಜೂನ್ 2007**

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಶಿಫಾರಸ್ಸು ಮಾಡಿರುವಂತೆ ಮಧುಗಿರಿ ಟೌನ್‌ನಲ್ಲಿ ರೇಷ್ಮೆ ಇಲಾಖೆಯು ಹೊಂದಿರುವ ರೇಷ್ಮೆಗೂಡಿನ ಮಾರುಕಟ್ಟೆ ಕಟ್ಟಡಗಳನ್ನು ಸಮಾಜ ಕಲ್ಯಾಣ ಇಲಾಖೆಯ ವಿದ್ಯಾರ್ಥಿಗಳ ವಸತಿ ಗೃಹ ಸ್ಥಾಪನೆ ಮಾಡಲು ಈ ಕೆಳಕಂಡ ಷರತ್ತುಗಳನ್ವಯ ತಾತ್ಕಾಲಿಕವಾಗಿ ಸಮಾಜ ಕಲ್ಯಾಣ ಇಲಾಖೆಗೆ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಸಮಾಜ ಕಲ್ಯಾಣ ಇಲಾಖೆಯಿಂದ (ಸದರಿ ಸಂಸ್ಥೆಯವರು) ಸದರಿ ಶಾಖೆಗೆ ಕಟ್ಟಡ ನಿರ್ಮಾಣ ಮಾಡಿದ ಅಥವಾ ಬೇರೆ ಕಟ್ಟಡಗಳು ದೊರಕಿದ ತಕ್ಷಣ ರೇಷ್ಮೆ ಇಲಾಖೆಯಿಂದ ವಶಪಡಿಸಿಕೊಂಡ ಕಟ್ಟಡಗಳನ್ನು ಇಲಾಖೆಯ ವಶಕ್ಕೆ ಬಿಟ್ಟುಕೊಡುವುದು.
2. ಕಟ್ಟಡಗಳನ್ನು ಯಾವುದೇ ರೀತಿ ಮಾರ್ಪಡಿಸದೇ ಯಥಾಸ್ಥಿತಿ ಕಾಯ್ದುಕೊಳ್ಳುವುದು.
3. ಕಟ್ಟಡಗಳ ಮೇಲೆ ಸಂಸ್ಥೆಯವರಿಗೆ ಯಾವುದೇ ಹಕ್ಕು ಇರುವುದಿಲ್ಲ.
4. ಕಟ್ಟಡಕ್ಕೆ ಸರಬರಾಜು ಆಗುವ ವಿದ್ಯುತ್ ಶುಲ್ಕ, ನೀರಿನ ಶುಲ್ಕ, ಕಂದಾಯ ಶುಲ್ಕ ಅಥವಾ ಇತರೆ ತೆರಿಗೆ ಶುಲ್ಕಗಳನ್ನು ಇಲಾಖೆಯ ಪರವಾಗಿ ಸಂಸ್ಥೆಯವರೇ ಭರಿಸತಕ್ಕದ್ದು.
5. ಕಟ್ಟಡಗಳು ದುರಸ್ತಿಗೆ ಬಂದಲ್ಲಿ ಸಂಸ್ಥೆಯವರೇ ದುರಸ್ಥಿ ಮಾಡಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1106

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ – ಸಂಸ್ಥೆಯ ಗೌರ್ನಿಂಗ್ ಕೌನ್ಸಿಲ್ ಅವಧಿಯನ್ನು ದಿನಾಂಕ: 08.04.07 ರಿಂದ 07.04.08 ರವರೆಗೆ ಮುಂದುವರೆಸುವ ಬಗ್ಗೆ

**ಓದಲಾಗಿದೆ:**

1 ಸರ್ಕಾರದ ಆದೇಶ ಸಂಖ್ಯೆ: ಸಿಐ 193 ಎಸ್‌ಜಿಎಫ್ 94 (ಭಾ) ದಿನಾಂಕ: 08.10.2003.

2 ಕರ್ನಾಟಕ ಸಕ್ಕರೆ ಸಂಸ್ಥೆಯ ನಿರ್ದೇಶಕರು, ರವರ ಪತ್ರ ಸಂಖ್ಯೆ: ಕಸಸಂ/ಗೌ.ಕೌ.ಚು/2006–07/401 ದಿನಾಂಕ: 15.03.07.

3 ಕರ್ನಾಟಕ ಸಕ್ಕರೆ ಸಂಸ್ಥೆಯ ನಿರ್ದೇಶಕರು ರವರ ಪತ್ರ ಸಂಖ್ಯೆ: ಕಸಸಂ/ಗೌ.ಕೌ.ಚು./2006–07/43 ದಿನಾಂಕ: 10.05.07.

ಪ್ರಸ್ತಾವನೆ:

ಮೇಲೆ ಓದಲಾದ ದಿನಾಂಕ: 08.10.03ರ ಸರ್ಕಾರದ ಆದೇಶದ ಮೊದಲನೇ ಅಂಶದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಯ ಆಡಳಿತ ನಿರ್ವಹಣೆಗೆ ಗೌರ್ನಿಂಗ್ ಕೌನ್ಸಿಲ್ ಜಾಗದಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಹ ಸದಸ್ಯರನ್ನಾಗಿ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳ ಮತ್ತು ಕೇಂದ್ರ ಸರ್ಕಾರದ ಇಲಾಖೆ ಮತ್ತು ಉದ್ಯಮ ಮತ್ತು ಪ್ರಯೋಗಾಲಯಗಳ ಪ್ರತಿನಿಧಿಗಳು ಮತ್ತು ಸಕ್ಕರೆ ಉದ್ಯಮದ ಪ್ರತಿನಿಧಿಗಳಾದ ಕರ್ನಾಟಕ ರಾಜ್ಯ ಸಹಕಾರಿ ಸಕ್ಕರೆ ಕಾರ್ಖಾನೆಗಳ ಮಹಾ ಮಂಡಳಿ ಮತ್ತು ದಕ್ಷಿಣ ಭಾರತ ಸಕ್ಕರೆ ಕಾರ್ಖಾನೆಗಳ ಒಕ್ಕೂಟ, ಬೆಂಗಳೂರು ಕೃಷಿ ವಿಶ್ವವಿದ್ಯಾಲಯಗಳ ಮತ್ತು ವಿಶ್ವೇಶ್ವರಯ್ಯ, ತಾಂತ್ರಿಕ ವಿಶ್ವವಿದ್ಯಾಲಯ ಇತ್ಯಾದಿಗಳ ಪ್ರತಿನಿಧಿಗಳನ್ನು ಒಳಗೊಂಡಂತೆ ಮುಂದಿನ ಮೂರು ವರ್ಷಗಳ ಅವಧಿಗೆ ಸಮಿತಿ ರಚಿಸುವುದು, ಅನಂತರ, ಸಂಸ್ಥೆಯ ಮೆಮೋರಾಂಡಮ್ ಆಫ್ ಅಸೋಸಿಯೇಷನ್‌ನಂತೆ ಚುನಾಯಿತ ಮಂಡಳಿಯು ಅಧಿಕಾರ ವಹಿಸಿಕೊಳ್ಳುವುದು ಎಂದು ಆದೇಶವಾಗಿದೆ.

ಓದಲಾದ (2)ರಲ್ಲಿರುವ ಪತ್ರದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಯ ನಿರ್ದೇಶಕರು, ಸರ್ಕಾರದ ಆದೇಶ ದಿನಾಂಕ: 08.10.03ರ ಪ್ರಕಾರ ಗೌರ್ನಂಗ್ ಕೌನ್ಸಿಲ್ ರಚನೆಗೆ ಚುನಾವಣೆ ನಡೆಸಲು ಸಂಸ್ಥೆಯ ಜ್ಞಾಪನಾ ಪತ್ರ ನಿಯಮ 25.26.27ರನ್ವಯ ಗೌರ್ನಿಂಗ್ ಕೌನ್ಸಿಲ್ ಚುನಾವಣೆಯನ್ನು ದಿನಾಂಕ: 08.04.07 ರೊಳಗಾಗಿ ನಡೆಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ವಿಭಾಗ ರವರನ್ನು ಚುನಾವಣಾ ಅಧಿಕಾರಿಯಾಗಿ ನೇಮಿಸಲಾಗಿದ್ದು, ಸದರಿ ಅಧಿಕಾರಿಯವರು ದಿನಾಂಕ: 07.12.06ರಂದು ಚುನಾವಣಾ ವೇಳಾ ಪಟ್ಟಿ ಪ್ರಕಟಿಸಿ, ದಿನಾಂಕ: 24.03.07ರಂದು ಚುನಾವಣೆ ದಿನಾಂಕ ನಿಗಧಿಪಡಿಸಿದ್ದು, ಇದನ್ನು ಸದಸ್ಯ ಕಾರ್ಖಾನೆಗಳಿಗೆ ತಿಳಿಸಿರುವುದಾಗಿ ಆದರೆ, ಕರ್ನಾಟಕ ಸಕ್ಕರೆ ಸಂಸ್ಥೆಯ ಜ್ಞಾಪನಾ ಪತ್ರ ನಿಯಮ (5)ರ ಪ್ರಕಾರ ಸದಸ್ಯ ಕಾರ್ಖಾನೆಗಳು ಚುನಾವಣೆ ದಿನಾಂಕದ 3 ತಿಂಗಳೊಳಗಾಗಿ ಕರ್ನಾಟಕ ಸಕ್ಕರೆ ಸಂಸ್ಥೆಗೆ ನೀಡಬೇಕಾದ ವಂತಿಗೆಯನ್ನು ಪಾವತಿಸದಿದ್ದಲ್ಲಿ ಮತ್ತು ನಿಯಮ (29)ರ ಪ್ರಕಾರ ಯಾವುದೇ ಬಾಕಿ/ವಂತಿಗೆ ಕೊಡಲು ಸಂಸ್ಥೆಯಾದಲ್ಲಿ ಚುನಾವಣೆಯಲ್ಲಿ ಭಾಗವಹಿಸಲು ಅರ್ಹತೆ ಇಲ್ಲದ ಬಗ್ಗೆ ವಿವರಿಸಿ, ಸಂಸ್ಥೆಗೆ ನೀಡಬೇಕಾದ ಸದಸ್ಯತ್ವ ಹಣ/ವಾರ್ಷಿಕ ವಂತಿಕೆ ಮತ್ತು ನುರಿಸಿದ ಪ್ರತಿ ಟನ್ ಕಬ್ಬಿಗೆ ಕೊಡಬೇಕಾದ ಹಣದ ವಿವರಗಳನ್ನು ನೀಡಿ ಕಾರ್ಖಾನೆಗೆ ನೋಟಿಸ್ ಜಾರಿ ಮಾಡಿ ದಿನಾಂಕ: 31.01.07ರೊಳಗೆ ಬಾಕಿ ಪಾವತಿಸಲು ತಿಳುವಳಿಕೆ ನೀಡಲಾಗಿದ್ದು, ಆದರೆ ಯಾವುದೇ ಕಾರ್ಖಾನೆಗಳು ಬಾಕಿ ಪಾವತಿಸದೇ ಇದ್ದ ಕಾರಣ ದಿನಾಂಕ: 01.02.07ರಲ್ಲಿ ಪುನಃ ನೋಟಿಸ್ ಜಾರಿ ಮಾಡಿ ತಿಳಿಸಲಾಗಿದ್ದಾಗಿದ್ದರೂ ಸಹ ಸಂಬಂಧಿಸಿದ ಕಾರ್ಖಾನೆಗಳು ಬಾಕಿ ಪಾವತಿಸಿರುವುದಿಲ್ಲವೆಂದು ವರದಿ ಮಾಡಿದ್ದಾರೆ. ಕರ್ನಾಟಕ ಸಕ್ಕರೆ ಸಂಸ್ಥೆಗೆ 32 ಸದಸ್ಯ ಕಾರ್ಖಾನೆಗಳಿದ್ದು, ಎಲ್ಲಾ ಸದಸ್ಯರು ಒಂದು ಅಥವಾ ಇನ್ನೊಂದು ರೀತಿಯಲ್ಲಿ ಸುಸ್ಥಿದಾರರಾಗಿದ್ದು, ಯಾವುದೇ ಕಾರ್ಖಾನೆಯು ಚುನಾವಣೆಯಲ್ಲಿ ಭಾಗವಹಿಸಲು ಅರ್ಹತೆ ಹೊಂದಿಲ್ಲದಿರುವ ಕಾರಣ ನಿಗಧಿತ ಅವಧಿಯಲ್ಲಿ ಚುನಾವಣೆ ಜರುಗಿಸಲಾಗಿರುವುದಿಲ್ಲವೆಂದು ವರದಿ ಮಾಡಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಗೌರ್ನಿಂಗ್ ಕೌನ್ಸಿಲ್‌ನ್ನೇ ಮುಂದುವರಿಸಲು ದಿನಾಂಕ: 24.02.07ರಲ್ಲಿ ಜರುಗಿದ ಕರ್ನಾಟಕ ಸಕ್ಕರೆ ಸಂಸ್ಥೆಯ ಗೌರ್ನಿಂಗ್ ಕೌನ್ಸಿಲ್ ಸಭೆಯಲ್ಲಿ ತೀರ್ಮಾನಿಸಿರುವುದಾಗಿ ಆದುದರಿಂದ ಹಾಲಿ ಕಾರ್ಯನಿರ್ವಹಿಸುತ್ತಿರುವ ಗೌರ್ನಿಂಗ್ ಕೌನ್ಸಿಲ್‌ನ್ನು ದಿನಾಂಕ: 08.04.07 ರಿಂದ ಇನ್ನು ಒಂದು ವರ್ಷದವರೆಗೆ ಮುಂದುವರೆಸಲು ಸಂಸ್ಥೆಯ ನಿರ್ದೇಶಕರು, ಮೇಲೆ ಓದಲಾದ (3)ರಲ್ಲಿರುವ ದಿನಾಂಕ: 10.05.07ರ ಪತ್ರದಲ್ಲಿ ಕೋರಿರುತ್ತಾರೆ.

ಮೇಲಿನ ವಿಷಯಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 121 ಎಸ್‌ಜಿಎಫ್ 2007 ಬೆಂಗಳೂರು ದಿನಾಂಕ: 31ನೇ ಮೇ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂ, ಇದರ ಹಾಲಿ ಕಾರ್ಯನಿರ್ವಹಿಸುತ್ತಿರುವ ಗೌರ್ನಿಂಗ್ ಕೌನ್ಸಿಲ್‌ನ್ನು ದಿನಾಂಕ: 08.04.07ರಿಂದ ಒಂದು ವರ್ಷದ ಅವಧಿಯವರೆಗೆ ಮಾತ್ರ ಮುಂದುವರೆಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1041

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಬೀದರ್ ಕಿಸಾನ್ ಸಕ್ಕರೆ ಕಾರ್ಖಾನೆ (ನಿ), ರವರು ಬೀದರ್ ಜಿಲ್ಲೆ, ಬೀದರ್ ತಾಲ್ಲೂಕು, ಮಾಗದಾಳ್ ಗ್ರಾಮದಲ್ಲಿ ಸ್ಥಾಪಿಸಲಿರುವ 19 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04 ದಿ: 16.03.05.
2 ಅಯುಕ್ತರು, ಕಬ್ಬು ಅಭಿವೃದ್ದಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/89/ 2004-05 ದಿನಾಂಕ: 27.06.2006.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ದಿ. ಬೀದರ್ ಕಿಸಾನ್ ಸಕ್ಕರೆ ಕಾರ್ಖಾನೆ (ನಿ), ರವರು ಬೀದರ್ ಜಿಲ್ಲೆ, ಬೀದರ್ ತಾಲ್ಲೂಕು, ಮಾಗದಾಳ್ ಗ್ರಾಮದಲ್ಲಿ 18 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಅಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 285 ಎಸ್‌ಜಿಎಫ್ 04 ಬೆಂಗಳೂರು, ದಿನಾಂಕ: 21ನೇ ಮೇ 2007**

ದಿ. ಬೀದರ್ ಕಿಸಾನ್ ಸಕ್ಕರೆ ಕಾರ್ಖಾನೆ (ನಿ), ರವರು ಬೀದರ್ ಜಿಲ್ಲೆ ಬೀದರ್ ತಾಲ್ಲೂಕು, ಮಾಗದಾಳ್ ಗ್ರಾಮದಲ್ಲಿ 18 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04, ದಿನಾಂಕ: 16.03.2005ರಲ್ಲಿನ ನಿಬಂಧನೆ (ಅ)ನ್ನು ಸಡಿಲಿಸುವ ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ.

ಮುಂದುವರೆದು ಸಹವಿದ್ಯುತ್ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1011

**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ವ್ಯವಸ್ಥಾಪಕ ನಿರ್ದೇಶಕು, ಮೈಸೂರು ಬಣ್ಣ ಮತ್ತು ವಾರ್ನಿಷ್ ನಿಯಮಿತ ಸಂಸ್ಥೆಯಲ್ಲಿ ಎಸಗಿರುವರೆನ್ನಲಾದ ಆರೋಪಗಳ ಕುರಿತು ಇಲಾಖಾ ವಿಚಾರಣೆ – ಅಂತಿಮ ಅದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1 ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ: ಕೈವಾಇ/ನಿರೀ–2/2003–04/ದಿನಾಂಕ: 11.06.2003.
2 ಸರ್ಕಾರದ ಆದೇಶ ಸಂಖ್ಯೆ: ವಾಕೈ/110/ಕೈಸೇವಿ/2004, ದಿ: 05.07.2004.
3. ಸರ್ಕಾರದ ಆದೇಶ ಸಂಖ್ಯೆ: ವಾಕೈ/110/ಕೈಸೇವಿ/2004, ದಿ: 03.11.2004.
4. ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರಿಗೆ ಹೊರಡಿಸಲಾಗಿದ್ದ ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ವಾಕೈ 110 ಕೇಸೇವಿ 2004/ದಿನಾಂಕ: 31.01.2005.
5. ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಸಲ್ಲಿಸಿರುವ ಲಿಖಿತ ಹೇಳಿಕೆ ದಿ: 10.03.2005 (ವಿಚಾರಣಾ ವರದಿಯ ತಃಖ್ತೆಯಲ್ಲಿ)
6. ಸರ್ಕಾರದ ಆದೇಶ ಸಂಖ್ಯೆ: ವಾಕೈ 110 ಕೈಸೇವಿ 2004, ದಿ: 01.12.2005.
7. ಶ್ರೀ ಬಿ.ಎಲ್. ಶ್ರೀಕಂಠಯ್ಯ, ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು (ನಿವೃತ್ತ) ಹಾಗೂ ವಿಚಾರಣಾಧಿಕಾರಿಗಳು, ಇವರ ವರದಿ ದಿನಾಂಕ: 15.03.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು 2002–03ನೇ ಸಾಲಿನಲ್ಲಿ ಮೈಸೂರು ಬಣ್ಣ ಮತ್ತು ವಾರ್ನಿಷ್ ನಿಯಮಿತದಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಕೆಲವೊಂದು ಅವ್ಯವಹಾರ ನಡೆಸಿರುತ್ತಾರೆ ಎಂದು ಆರೋಪಿಸಿ ನೀಡಿರುವ ದೂರಿನ ಹಿನ್ನಲೆಯಲ್ಲಿ ಈ ಬಗ್ಗೆ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು ರವರಿಂದ ತನಿಖೆ ನಡೆಸಿ ಅವರು ನೀಡಿರುವ ತನಿಖಾ ವರದಿಯಲ್ಲಿ (1) ಕಂಪನಿಯಿಂದ ಟರ್ಕಿ ದೇಶಕ್ಕೆ ರಫ್ತು ಕಳುಹಿಸಲಾದ/ಅಳಿಸಲಾಗದ ಶಾಯಿಯಲ್ಲಿ ಭಾರಿ ಅವ್ಯವಹಾರ (2) ರಫ್ತು ಮಾಡಲಾದ/ಅಳಿಸಲಾಗದ ಶಾಯಿಯಿಂದ ಖರೀದಿದಾರರಿಗೆ ಉಡುಗೊರೆ ನೀಡುವ ನೆಪದಲ್ಲಿ ಭಾರಿ ಅವ್ಯವಹಾರ (3) ಕಂಪನಿಯಲ್ಲಿ ದುರಸ್ತಿ ಹಾಗೂ ಬಣ್ಣ ಬಳಸುವ ವ್ಯವಹಾರದಲ್ಲಿ ಭಾರಿ ಹಣ ದುರುಪಯೋಗ (4) ದಸರಾ ಮಳಿಗೆಯಲ್ಲಿ ಅವ್ಯವಹಾರ ಮತ್ತು (5) ಕಂಪ್ಯೂಟರ್ ಖರೀದಿಯಲ್ಲಿ ಭಾರಿ ಅವ್ಯವಹಾರ ಇತ್ಯಾದಿ ಅವ್ಯವಹಾರಗಳಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಎಂದು ತಿಳಿಸಿದ್ದರ ಮೇರೆಗೆ, ಸರ್ಕಾರವು ಶಿಸ್ತು ಪ್ರಾಧಿಕಾರಿಯಾದ್ದರಿಂದ ಮುಂದಿನ ಕ್ರಮ ತೆಗೆದುಕೊಳ್ಳಲು ಕೋರಿದ್ದರು.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು ಇವರು ಮೈಸೂರು ಬಣ್ಣ ಮತ್ತು ವಾರ್ನಿಷ್ ನಿಯಮಿತ, ಮೈಸೂರು, ಇಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಅವ್ಯವಹಾರ ಎಸಗಿದ್ದಾರೆಂದು ಆರೋಪಿಸಲಾದ ಆರೋಪಗಳು ಮೇಲ್ನೋಟಕ್ಕೆ ಸತ್ಯಾಂಶದಿಂದ ಕೂಡಿರುವುದರಿಂದ, ಸದರಿ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 (1)(ಡಿ) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (3)ರ ಆದೇಶದಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10 ಉಪ ನಿಯಮ (5) (ಸಿ)ಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ನೇಮಕ ಮಾಡಲಾಗಿತ್ತು.

ಮೇಲೆ ಓದಲಾಧ (4)ರಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರಿಗೆ ಮೇಲ್ಕಂಡ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ ಸಿ.ಸಿ.ಎ. ನಿಯಮಾವಳಿಗಳು 1957 ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿ ಮತ್ತಿತರ ಅನುಬಂಧಗಳನ್ನು ದಿನಾಂಕ: 31.01.2005 ರಂದು ಜಾರಿಗೊಳಿಸಲಾಗಿತ್ತು.

ಮೇಲೆ ಓದಲಾದ(5) ಪತ್ರದಲ್ಲಿ ಕಾರಣ ಕೇಳುವ ನೋಟೀಸಿಗೆ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ ತನ್ನ ಮೇಲೆ ಹೊರಡಿಸಿರುವ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ.

ಮೇಲೆ ಓದಲಾದ (6)ರ ಆದೇಶದಲ್ಲಿ ಶ್ರೀ ಕೆ.ಪಿ. ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಮೈಸೂರು ಬಣ್ಣ ಮತ್ತು ವಾರ್ನಿಷ್ ಕಂಪನಿಯಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿರುವ ಅವ್ಯವಹಾರಗಳಿಗೆ ಸಂಬಂಧಿಸಿದತೆ, ಕೆ.ಪಿ.ಎಸ್ (ಸಿ.ಸಿ.ಎ) ನಿಯಮಗಳು 1957 ನಿಯಮ 11ರ ಉಪ ನಿಯಮ 5ನ್ನು ಓದಿಕೊಂಡಂತೆ ಅದೇ ನಿಯಮದ ಉಪ ನಿಯಮ (2)ರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಪ್ರಕರಣದಲ್ಲಿ ವಿಚಾರಣೆಯನ್ನು ನಡೆಸಲು ಶ್ರೀ ಬಿ.ಎಸ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು, ನಂ.231/ನಾಗಶ್ರೀ ನಿಲಯ, 4ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ, ಹಾಗೂ ಉಪ ನಿರ್ದೇಶಕರು (ಆಡಳಿತ) ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರದ ಆದೇಶವನ್ನು ಹೊರಡಿಸಲಾಗಿತ್ತು.

ಮೇಲೆ ಓದಲಾದ (7)ರ ದಿನಾಂಕ: 15.03.2007ರ ಪತ್ರದಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು (ನಿವೃತ್ತ) ಹಾಗೂ ವಿಚಾರಣಾಧಿಕಾರಿಗಳು, ಸದರಿ ಪ್ರಕರಣದದ ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಸರ್ಕಾರಕ್ಕೆ ಕಳುಹಿಸಿ ಆರೋಪಗಳು ಸಾಬೀತಾಗಿಲ್ಲವಾದ ಕಾರಣ ಆಪಾದಿತ ಅಧಿಕಾರಿಯನ್ನು ದೋಷಮುಕ್ತಗೊಳಿಸುವಂತೆ ಶಿಫಾರಸ್ಸು ಮಾಡಿದ್ದಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/12/ಸೇಇವಿ/94/ದಿನಾಂಕ: 07.12.94ರಲ್ಲಿ ಇಲಾಖಾ ವಿಚಾರಣಾ ವರದಿಯು ಸ್ವೀಕೃತವಾದ ನಂತರ ಮುಂದೆ ಕೈಗೊಳ್ಳಬೇಕಾದ ಕ್ರಮದ ಬಗ್ಗೆ ಸ್ಪಷ್ಟವಾಗಿ ಮಾರ್ಗದರ್ಶನ ನೀಡಿರುತ್ತದೆ. ಅದರಂತೆ ವಿಚಾರಣಾ ವರದಿಯನ್ನು ಸರ್ಕಾರದಲ್ಲಿ ಪರಿಶೀಲಿಸಿ ಹಾಗೂ ಈ ಕೆಳಕಂಡಂತೆ ಅಂತಿಮ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 110 ಕೈಸೇವಿ 2004/ಬೆಂಗಳೂರು, ದಿನಾಂಕ: 22ನೇ ಮೇ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿದ ನಂತರ ಶ್ರೀ ಕೆ.ಪಿ.ಪರಮೇಶ್ವರಪ್ಪ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು ಇವರು ಹಿಂದೆ ವ್ಯವಸ್ಥಾಪಕ ನಿರ್ದೇಶಕರಾಗಿ ಮೈಸೂರು ಬಣ್ಣ ಮತ್ತು ವಾರ್ನಿಷ್ ನಿಯಮಿತ ಸಂಸ್ಥೆಯಲ್ಲಿ ಎಸಗಿರುವರೆನ್ನಲಾದ ಆರೋಪಗಳ ವಿರುದ್ಧ ನಿಯಮಾವಳಿಯನುಸಾರ ಇಲಾಖಾ ವಿಚಾರಣೆ ನಡೆಸಿ ಹಾಗೂ ಇಲಾಖಾ ವಿಚಾರಣೆ ವರದಿಯಲ್ಲಿನ ಶಿಫಾರಸ್ಸುಗಳನ್ನು ಸರ್ಕಾರವು ಒಪ್ಪಿ, ಸದರಿ ಅಧಿಕಾರಿಯವರನ್ನು ಮೇಲಿನ ಆರೋಪಗಳಿಂದ ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1010

**ಎಲ್.ಎಸ್. ವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
(ಸೇವೆಗಳು)

**ವಿಷಯ:** ಶ್ರೀ ಎಲ್.ಎಂ. ಮಂಜುನಾಥ್, ರೇಷ್ಮೆ ಪ್ರವರ್ತಕರು ಇವರ ಪರೀಕ್ಷಾರ್ಥ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1 ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ 1 (5) ಪಪೂಅ/ವಿಸ್ತರಣೆ/88/06-07, ದಿನಾಂಕ: 26/28-3-2007

2 ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ 1 (5)/ರೇಪ್ರವ/ಪಪೂಅ/ವಿಸ್ತರಣೆ/88/06-07, ದಿನಾಂಕ: 26-3-2007.

**ಪ್ರಸ್ತಾವನೆ:**

ಶ್ರೀ ಎಲ್.ಎಂ. ಮಂಜುನಾಥ್, ರೇಷ್ಮೆ ಪ್ರವರ್ತಕರು, ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಕೆಂಪನಹಳ್ಳಿ ಇವರ ಅನುಕಂಪದ ಆಧಾರದ ಮೇಲೆ ನೇಮಕಗೊಂಡು ದಿನಾಂಕ: 19-6-2004 ರಂದು ಕಾರ್ಯವರದಿ ಮಾಡಿಕೊಂಡಿರುತ್ತಾರೆ. ಇವರು ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಂಡಿರುವುದಿಲ್ಲವಾದ್ದರಿಂದ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಳ್ಳಲು 2 ವರ್ಷಗಳ ಹೆಚ್ಚುವರಿ ಕಾಲಾವಕಾಶ ನೀಡುವಂತೆ ಹಾಗೂ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವಂತೆ ಇಲಾಖಾ ಮುಖ್ಯಸ್ಥರನ್ನು ಕೋರಿದ್ದ ಮೇರೆಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಅಧಿಕೃತ ಜ್ಞಾಪನದಲ್ಲಿ ಈ ನೌಕರರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 19-6-2006 ರಿಂದ ದಿನಾಂಕ: 18-6-2007 ರವರೆಗೆ ವಿಸ್ತರಿಸಿ, ಆದೇಶಿಸಿ, ಸರ್ಕಾರದಿಂದ ಈ ನೌಕರರ ಪರಿವೀಕ್ಷಣಾ ಅವಧಿಯನ್ನು 19-6-2007 ರಿಂದ 18-7-2008ರ ವರೆಗೆ ವಿಸ್ತರಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅವರು ಶಿಫಾರಸ್ಸು ಮಾಡಿರುವಂತೆ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 57 ರೇಇವಿ 2007, ಬೆಂಗಳೂರು, ದಿನಾಂಕ: 21ನೇ ಮೇ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎಲ್.ಎಂ. ಮಂಜುನಾಥ್, ರೇಷ್ಮೆ ಪ್ರವರ್ತಕರು, ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಕೆಂಪನಹಳ್ಳಿ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 19-6-2007 ರಿಂದ 18-6-2008 ರವರೆಗೆ 1977ರ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳ ನಿಯಮ (4) (1) (i) ರನ್ವಯ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.997

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳನ್ನು ಕಾಮಗಾರಿ ಅನುಷ್ಠಾನಕ್ಕಾಗಿ 2007-08ನೇ ಸಾಲಿನ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1 ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/ರಕರ/ಅಧಾನ/13/2007 ದಿನಾಂಕ: 09.04.07 ಡಿಎಸ್‌ಕೆ/ಡಿ.ಇ.ವಿ./ರಕರ/ಅ.ದಾನ/1/2006-07 ದಿನಾಂಕ: 29.05.07.

2 ಆರ್ಥಿಕ ಇಲಾಖೆ (ಲೋ.ಇ. ಆರ್ಥಿಕ ಕೋಶ) ರವರ ಪತ್ರ ಸಂಖ್ಯೆ: ಲೋಇ/275/ಅಕೋ-1/07 ದಿನಾಂಕ: 24.04.07.

**ಪ್ರಸ್ತಾವನೆ:**

ರಾಜ್ಯದ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳ ಕಾಮಗಾರಿಗಳ ಅನುಷ್ಠಾನಕ್ಕಾಗಿ 2007-08ನೇ ಸಾಲಿನಲ್ಲಿ ಒದಗಿಸಲಾಗಿರುವ ರೂ. 160.00 ಲಕ್ಷಗಳಲ್ಲಿ ರೂ. 158.13 ಲಕ್ಷಗಳನ್ನು ಬಿಡುಗಡೆಗೊಳಿಸಲು ಸಕ್ಕರೆ ನಿರ್ದೇಶಕರು ಮೇಲೆ ಓದಲಾದ (1)ರ ದಿನಾಂಕ: 09.04.07 ಮತ್ತು 29.05.07ರ ಪತ್ರಗಳಲ್ಲಿ ಪ್ರಸ್ತಾಪಿಸಿದ್ದಾರೆ.

| ಕ್ರ.ಸಂ. | ಕಾರ್ಖಾನೆಯ ಹೆಸರು | ವರ್ಷ | ಮೊತ್ತ |
|---|---|---|---|
| 1. | ಗೋದಾವರಿ ಶುಗರ್ಸ್ (ಲಿ), ಸಮೀರವಾಡಿ | 1998-1999 | 12.00 |
| 2. | ಗೋದಾವರಿ ಶುಗರ್ಸ್ (ಲಿ), ಸಮೀರವಾಡಿ | 1999-2000 | 48.46 |
| 3. | ಐ.ಎಸ್.ಆರ್. ಶುಗರ್ಸ್ (ಲಿ), ಹೊಸಪೇಟೆ | 2000-2001 | 14.18 |
| 4. | ಶ್ಯಾಮನೂರು ಶುಗರ್ಸ್ (ಲಿ), ದುಗ್ಗಾವತಿ | 2000-2001 | 21.28 |
| 5. | ಗೋದಾವರಿ ಶುಗರ್ಸ್ (ಲಿ), ಸಮೀರವಾಡಿ | 2001-2002 | 10.20 |
| 6. | ಹೇಮಾವತಿ ಸಹಕಾರ ಸಕ್ಕರೆ ಕಾರ್ಖಾನೆ (ನಿ), ಶ್ರೀನಿವಾಸಪುರ | 2002-2003 | 12.45 |
| 7. | ಹೇಮಾವತಿ ಸಹಕಾರ ಸಕ್ಕರೆ ಕಾರ್ಖಾನೆ (ನಿ), ಶ್ರೀನಿವಾಸಪುರ | 2003-2004 | 8.17 |

| | | | |
|---|---|---|---|
| 8. | ಕರ್ನಾಟಕ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಹಾವೇರಿ | 1998–1999 | 23.70 |
| 9. | ಕರ್ನಾಟಕ ಸಹಕಾರ ಸಕ್ಕರೆ ಕಾರ್ಖಾನೆ (ನಿ), ಹಾವೇರಿ | 2002–2003 | 5.01 |
| 10. | ಕರ್ನಾಟಕ ಸಹಕಾರ ಸಕ್ಕರೆ ಕಾರ್ಖಾನೆ (ನಿ), ಹಾವೇರಿ | 2003–2004 | 2.68 |
| | **ಒಟ್ಟು** | | **158.13** |

ಮುಂದುವರಿದು, ಈ ಹಣವು 1998–99 ರಿಂದ 2002–03ನೇ ಸಾಲಿನಲ್ಲಿ ರಸ್ತೆ ಕರದಿಂದ ಸಂಗ್ರಹವಾಗಿದೆ. 1998–99 ರಿಂದ 2003–04ರ ಸಾಲಿನವರೆಗೆ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ರೂ. 933.62 ಲಕ್ಷ ಬಿಡುಗಡೆಗೆ ಬಾಕಿ ಇದ್ದು, 2004–05 ಮತ್ತು 2005–06ನೇ ಸಾಲಿನಲ್ಲಿ ಕ್ರಮವಾಗಿ ರೂ. 569.41 ಲಕ್ಷ ಮತ್ತು 865.18 ಲಕ್ಷಗಳು ಸಂಗ್ರಹವಾಗಿದೆ. ಸದರಿ ಹಣ ಬಿಡುಗಡೆಗೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯು, ಆರ್ಥಿಕ ಇಲಾಖೆ (ವೆಚ್ಚ–1) ಇವರೊಂದಿಗೆ ಈ ಕುರಿತು ನಿರ್ವಹಿಸುವಂತೆ, 24.04.07ರ ಪತ್ರದಲ್ಲಿ ಆರ್ಥಿಕ ಇಲಾಖೆ (ಲೋ.ಇ ಆರ್ಥಿಕ ಕೋಶ) ರವರು ಸಕ್ಕರೆ ನಿರ್ದೇಶಕ ರವರಿಗೆ ಮೇಲೆ ಓದಲಾದ (2)ರ ದಿನಾಂಕ: 24.04.07ರ ಪತ್ರದಲ್ಲಿ ತಿಳಿಸಿರುತ್ತಾರೆ.

ಅದರಂತೆ 2007–08ನೇ ಸಾಲಿಗೆ ಈ ಉದ್ದೇಶಕ್ಕಾಗಿ 160 ಲಕ್ಷ ರೂ.ಗಳ ಅನುದಾನವನ್ನು ಇಲಾಖೆಯ ಲೆಕ್ಕ ಶೀರ್ಷಿಕೆ 4860–04–800–0–01–172ರ ಅಡಿಯಲ್ಲಿ ಒದಗಿಸಲಾಗಿದೆ. ಸದರಿ ಹಣದಲ್ಲಿ 158.13 ಲಕ್ಷ ರೂ.ಗಳ ಬಿಡುಗಡೆಗೆ ಆಯುಕ್ತರು ಕಬ್ಬು ಅಭಿವೃದ್ಧಿರವರು ಉಲ್ಲೇಖಿತ (1)ರಲ್ಲಿನ ಪತ್ರಗಳಲ್ಲಿ ಕೋರಿರುತ್ತಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 164 ಎಸ್‌ಜಿಎಫ್ 07 ಬೆಂಗಳೂರು, ದಿನಾಂಕ: 20ನೇ ಜೂನ್ 2007**

ಆಯುಕ್ತರು ಕಬ್ಬು ಅಭಿವೃದ್ಧಿರವರು ಪ್ರಸ್ತಾವನೆಯಲ್ಲಿ ಕೋರಿರುವಂತೆ ರಾಜ್ಯದ ಈ ಕೆಳಕಂಡ 10 ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ಅಭಿವೃದ್ಧಿಪಡಿಸುವ ಕ್ರಿಯಾ ಯೋಜನೆಯನ್ನು ಕಾರ್ಯಗತಗೊಳಿಸಲು 2007–08ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4860–04–800–0–01–172ರಡಿ ಒದಗಿಸಲಾಗಿರುವ 160.00 ಲಕ್ಷ ರೂ.ಗಳ ಅನುದಾನದಲ್ಲಿ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 7 ಬಿಪಿಇ 07 ದಿನಾಂಕ: 30.03.07ರನ್ವಯ ಆಯವ್ಯಯವನ್ನು 4 ತಿಂಗಳಿಗೆ ಅನುಮೋದನೆ ನೀಡಲಾಗಿರುವುದರಿಂದ 1/3 ಭಾಗದಷ್ಟು ಅಂದರೆ 53 ಲಕ್ಷ ರೂಗಳನ್ನು (ಐವತ್ತು ಮೂರು ಲಕ್ಷ ರೂಗಳು ಮಾತ್ರ) ಈ ಕೆಳಕಂಡ ರಸ್ತೆ ಕಾಮಗಾರಿಗಳಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು ಕಬ್ಬು ಅಭಿವೃದ್ಧಿ ರವರಿಗೆ ಬಿಡುಗಡೆ ಮಾಡಲಾಗಿದೆ.

| ಕ್ರ.ಸಂ. | ಕಾರ್ಖಾನೆಯ ಹೆಸರು | ಸಂಗ್ರಹಿಸಲಾದ ವರ್ಷ | ಬಿಡುಗಡೆ ಮೊತ್ತ |
|---|---|---|---|
| 1. | ಗೋದಾವರಿ ಶುಗರ್ಸ್ (ಲಿ), ಸಮೀರವಾಡಿ | 1998–1999 | 12.00 |
| 2. | ಗೋದಾವರಿ ಶುಗರ್ಸ್ (ಲಿ), ಸಮೀರವಾಡಿ | 1999–2000 | 48.46 |
| 3. | ಐ.ಎಸ್.ಆರ್. ಶುಗರ್ಸ್ (ಲಿ), ಹೊಸಪೇಟೆ | 2000–2001 | 14.18 |
| 4. | ಶ್ಯಾಮನೂರು ಶುಗರ್ಸ್ (ಲಿ), ದುಗ್ಗಾವತಿ | 2000–2001 | 21.28 |
| 5. | ಗೋದಾವರಿ ಶುಗರ್ಸ್ (ಲಿ), ಸಮೀರವಾಡಿ | 2001–2002 | 10.20 |
| 6. | ಹೇಮಾವತಿ ಸಹಕಾರ ಸಕ್ಕರೆ ಕಾರ್ಖಾನೆ (ನಿ), ಶ್ರೀನಿವಾಸಪುರ | 2002–2003 | 12.45 |
| 7. | ಹೇಮಾವತಿ ಸಹಕಾರ ಸಕ್ಕರೆ ಕಾರ್ಖಾನೆ (ನಿ), ಶ್ರೀನಿವಾಸಪುರ | 2003–2004 | 8.17 |
| 8. | ಕರ್ನಾಟಕ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಹಾವೇರಿ | 1998–1999 | 23.70 |
| 9. | ಕರ್ನಾಟಕ ಸಹಕಾರ ಸಕ್ಕರೆ ಕಾರ್ಖಾನೆ (ನಿ), ಹಾವೇರಿ | 2002–2003 | 5.01 |
| 10. | ಕರ್ನಾಟಕ ಸಹಕಾರ ಸಕ್ಕರೆ ಕಾರ್ಖಾನೆ (ನಿ), ಹಾವೇರಿ | 2003–2004 | 2.68 |
| | **ಒಟ್ಟು** | | **158.13** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ: 02.09.06ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1151

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಮೆ. ಇಂಡಿಯನ್ ಶುಗರ್ ಮ್ಯಾನುಫ್ಯಾಕ್ಚರಿಂಗ್ ಕಂ., (ಲಿ), ರವರು ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಹಾವಿನಾಳ ಗ್ರಾಮದಲ್ಲಿ ಸ್ಥಾಪಿಸಲಿರುವ 12 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 1250 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04 ದಿ: 16.03.05.

2 ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/43/ 2006-07 ದಿನಾಂಕ: 18.10.2006

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಮೆ. ಇಂಡಿಯನ್ ಶುಗರ್ ಮ್ಯಾನುಫ್ಯಾಕ್ಚರಿಂಗ್ ಕಂ., (ಲಿ), ರವರು ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಹಾವಿನಾಳ ಗ್ರಾಮದಲ್ಲಿ 12 ಮೆ. ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 1250 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 192 ಎಸ್‌ಜಿಎಫ್ 06, ಬೆಂಗಳೂರು, ದಿನಾಂಕ: 21ನೇ ಮೇ 2007**

ಮೆ. ಇಂಡಿಯನ್ ಶುಗರ್ ಮ್ಯಾನುಫ್ಯಾಕ್ಚರಿಂಗ್ ಕಂ., (ಲಿ), ರವರು ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಹಾವಿನಾಳ ಗ್ರಾಮದಲ್ಲಿ 12 ಮೆ. ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 1250 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಐ260 ಎಸ್‌ಜಿಎಫ್ 04, ದಿನಾಂಕ: 16.03.2005ರ ನಿಬಂಧನೆ (ಅ)ನ್ನು ಸಡಿಲಿಸುವ ಮೂಲಕ ಸರ್ಕಾರದ ತಾತ್ವಿಕ ಅನುಮೋದನೆಯನ್ನು ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು 5 ವರ್ಷದೊಳಗಾಗಿ 2500 ಟಿಸಿಡಿಗೆ ಹೆಚ್ಚಿಸಬೇಕೆಂದು ಷರತ್ತಿನೊಂದಿಗೆ ನೀಡಲಾಗಿದೆ.

ಮುಂದುವರೆದು ಸಹವಿದ್ಯುತ್ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.995

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತ ಕೈಗಾರಿಕೆ ಇಲಾಖೆ.

**ವಿಷಯ:** ಗದಗ ಜಿಲ್ಲೆಯ ಬೆಳದಡಿ ಗ್ರಾಮದಲ್ಲಿರುವ 1.00 ಎಕರೆ ಜಮೀನು (ಸರ್ವೆ ನಂ. 85) ಹಾಗೂ ಅದರಲ್ಲಿಯ ಎರಡು ಕಟ್ಟಡಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಪಿಎಸ್/ಕಾಮಗಾರಿ/ಅಕಬೆ/21/06-07, ದಿನಾಂಕ: 2-3-2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಗದಗ ಜಿಲ್ಲೆಯ ಬೆಳದಡಿ ಗ್ರಾಮದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿಗೋಸ್ಕರ ವಿಶೇಷ ಜಿಲ್ಲಾಧಿಕಾರಿಯವರಿಂದ ಪಡೆದ 1.00 ಎಕರೆ ಜಮೀನಿನಲ್ಲಿ ಹುಳು ಸಾಕಾಣಿಕಾ ಕಟ್ಟಡ ಹಾಗೂ ಚಾಕಿ ಸಾಕಾಣಿಕಾ ಕಟ್ಟಡವನ್ನು ನಿರ್ಮಿಸಲಾಗಿದ್ದ ಬಗ್ಗೆ ಮತ್ತು ಈಗ ಸದರಿ ಜಮೀನು ಮತ್ತು ಕಟ್ಟಡಗಳನ್ನು ರೇಷ್ಮೆ ಚಟುವಟಿಕೆಯಲ್ಲಿ ಉಪಯೋಗಿಸುತ್ತಿಲ್ಲವೆಂದು ತಿಳಿಸಿ, ಬೆಳದಡಿ ಗ್ರಾಮ ತಾಂಡದಲ್ಲಿರುವ ಡಿ.ಪಿ.ಇ.ಪಿ ಶಾಲೆಗೆ ಮಕ್ಕಳ ಸಂಖ್ಯೆ ಹೆಚ್ಚಾಗಿದ್ದು, ಶಿಕ್ಷಣಕ್ಕೆ ಅನುಕೂಲವಾಗುವಂತೆ ರೇಷ್ಮೆ ಇಲಾಖೆಯ ಕಟ್ಟಡ ಹಾಗೂ ಜಮೀನನ್ನು ಶಿಕ್ಷಣ ಇಲಾಖೆಗೆ ನೀಡುವಂತೆ ಬೆಳದಡಿ ಗ್ರಮ ಪಂಚಾಯತಿಯವರು ಹಾಗೂ ಸ್ಥಳೀಯ ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೋರಿರುವುದರಿಂದ ಸದರಿ ಬೆಳದಡಿ ಗ್ರಾಮದಲ್ಲಿ ರೇಷ್ಮೆ ಇಲಾಖೆಯು ಹೊಂದಿರುವ ಕಟ್ಟಡ ಹಾಗೂ ಜಮೀನನ್ನು ಸದ್ಯಕ್ಕೆ ಇಲಾಖೆಯು ಉಪಯೋಗಿಸುತ್ತಿಲ್ಲವಾದ್ದರಿಂದ ಬೆಳದಡಿ ತಾಂಡದ ಮಕ್ಕಳ ಶೈಕ್ಷಣಿಕ ಅಭಿವೃದ್ಧಿಗಾಗಿ ನೀಡುವುದು ಸಮಂಜಸವೆಂದು ತಿಳಿಸಿರುತ್ತಾರೆ.

ರೇಷ್ಮೆ ಆಯುಕ್ತರ ಪತ್ರದಲ್ಲಿಯ ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಲಾಗಿದ್ದು, ಬೆಳವಡಿ ಗ್ರಾಮದ ಮಕ್ಕಳ ಶಿಕ್ಷಣದ ಹಿತದೃಷ್ಟಿಯಿಂದ ಪ್ರಸ್ತಾವಿತ ಜಮೀನನ್ನು ಶಿಕ್ಷಣ ಇಲಾಖೆಗೆ ವಹಿಸಿಕೊಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 7 ರೇಯೋವಿ 2007, ಬೆಂಗಳೂರು, ದಿನಾಂಕ: 19ನೇ ಮೇ 007**

ಗದಗ ಜಿಲ್ಲೆಯ ಬೆಳದಡಿ ಗ್ರಾಮದಲ್ಲಿ ಸರ್ವೆ ನಂ. 85ರಲ್ಲಿ ರೇಷ್ಮೆ ಇಲಾಖೆಯು ಹೊಂದಿರುವ 1.00 ಎಕರೆ ಜಮೀನನ್ನು, ಅದರಲ್ಲಿರುವ 41 ಚದರ ಮೀಟರ್ ಹುಳು ಸಾಕಾಣಿಕಾ ಕಟ್ಟಡ ಹಾಗೂ 41 ಚದರ ಮೀಟರ್ ಚಾಕಿ ಸಾಕಾಣಿಕೆ

ಕಟ್ಟಡ ಸಹಿತ ಬೆಳದಡಿ ಗ್ರಾಮದ ತಾಂಡದಲ್ಲಿರುವ ಡಿ.ಪಿ.ಇ.ಪಿ. ಶಾಲೆಯ ಅನುಕೂಲಕ್ಕಾಗಿ ಮಾಲೀಕತ್ವವನ್ನು ರೇಷ್ಮೆ ಇಲಾಖೆಯಲ್ಲಿ ಉಳಿಸಿಕೊಂಡು ತಾತ್ಕಾಲಿಕವಾಗಿ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.996

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಮೆ. ಮನಾಲಿ ಶುಗರ್ಸ್ (ಲಿ), ಸಕ್ಕರೆ ಕಾರ್ಖಾನೆಯನ್ನು ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ್ ತಾಲ್ಲೂಕಿನ ಯಲಗೂರು ಗ್ರಾಮದಿಂದ ಸಿಂಧಗಿ ತಾಲ್ಲೂಕು, ಮಾಲಗಾನ್ ಗ್ರಾಮಕ್ಕೆ ಸ್ಥಳಾಂತರಿಸಿ, ಸ್ಥಾಪಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಪತ್ರ ಸಂಖ್ಯೆ: ಸಿಐ 159 ಎಸ್‌ಜಿಎಫ್ 05 ದಿ: 11.10.05.
2 ಅಧ್ಯಕ್ಷರು ಮನಾಲಿ ಶುಗರ್ಸ್ ರವರ ಪತ್ರ ಸಂಖ್ಯೆ: ಎಂ.ಎಸ್.ಎಮ್./ಎ.ಡಿ.ಎಂ./ 2006-07 ದಿನಾಂಕ: 05.02.2007.
3. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/49/95-06 ದಿನಾಂಕ: 17.05.2007 ಮತ್ತು 12.06.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ಪತ್ರದಲ್ಲಿ ಮೆ. ಮನಾಲಿ ಶುಗರ್ಸ್ (ಲಿ), ರವರು ಯಲಗೂರು ಗ್ರಾಮ ಮುದ್ದೇಬಿಹಾಳ್ ತಾಲ್ಲೂಕು, ಬಿಜಾಪುರ ಜಿಲ್ಲೆ ಇಲ್ಲಿ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿತ್ತು.

ಉಲ್ಲೆಖ (2)ರಲ್ಲಿರುವ ಮೆ. ಮನಾಲಿ ಶುಗರ್ಸ್ (ಲಿ) ಈ ಕಾರ್ಖಾನೆಯ ಅಧ್ಯಕ್ಷರು ರವರ ಪತ್ರದಲ್ಲಿ, ಕಾರ್ಖಾನೆಯ ಸ್ಥಾಪನಾ ಸ್ಥಳವನ್ನು ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ್ ತಾಲ್ಲೂಕು, ಯಲಗೂರುನಿಂದ ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಮಾಲಗಾನ್ ಎಂಬಲ್ಲಿಗೆ ಸ್ಥಳಾಂತರಿಸಿಕೊಳ್ಳಲು ಉದ್ದೇಶಿಸಿ, ಈ ಸ್ಥಳಕ್ಕೆ ಕೇಂದ್ರ ಸರ್ಕಾರದಿದ ದಿನಾಂಕ: 08.03.2006ರಲ್ಲಿ ಐ.ಇ.ಎಂ. ಪಡೆಯಲಾಗಿದೆ ಎಂದು ತಿಳಿಸಿ, ಕಾರ್ಖಾನೆಯ ಸ್ಥಾಪನಾ ಸ್ಥಳವನ್ನು ಸಿಂಧಗಿ ತಾಲ್ಲೂಕಿನ ಮಾಲಗಾನ್ ಎಂಬಲ್ಲಿಗೆ ಸ್ಥಳಾಂತರಿಸಿಕೊಳ್ಳಲು ಸರ್ಕಾರದ ಅನುಮತಿ ನೀಡಲು ಕೋರಿದ್ದಾರೆ.

ಉಲ್ಲೇಖ (3)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರಗಳಲ್ಲಿ ಮೆ. ಮನಾಲಿ ಶುಗರ್ಸ್ (ಲಿ) ರವರು ತಮ್ಮ ಕಾರ್ಖಾನೆಯ ಸ್ಥಾಪನಾ ಸ್ಥಳವನ್ನು ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ್ ತಾಲ್ಲೂಕು, ಯಲಗೂರುನಿಂದ ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು, ಮಾಲಗಾಂನ್ ಎಂಬಲ್ಲಿಗೆ ಸ್ಥಳಾಂತರಿಸಿ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಗೆ ಈ ಹಿಂದೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 159 ಎಸ್‌ಜಿಎಫ್ 05 ದಿನಾಂಕ: 13.01.2006ರಲ್ಲಿ ಹಂಚಿಕೆ ಮಾಡಲಾದ ಕಬ್ಬಿನ ಮೀಸಲು ಕ್ಷೇತ್ರಗಳನ್ನೇ ತಾತ್ಕಾಲಿಕವಾಗಿ ಮುಂದುವರಿಸಿ ಕಾರ್ಖಾನೆಯ ಸ್ಥಾಪನಾ ಸ್ಥಳವನ್ನು ಬಿಜಾಪುರ ಜಿಲ್ಲೆ ಸಿಂಧಗಿ ತಾಲ್ಲೂಕು ಮಾಲಗಾನ್ ಎಂಬಲ್ಲಿಗೆ ಸ್ಥಳಾಂತರಿಸಲು ಅನುಮತಿ ನೀಡಬಹುದೆಂದು ಶಿಫಾರಸ್ಸು ಮಾಡಿದ್ದಾರೆ.

ಕಾರ್ಖಾನೆಯ ಅಧ್ಯಕ್ಷರು, ಮತ್ತು ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 10 ಎಸ್‌ಜಿಎಫ್ 07 ಬೆಂಗಳೂರು, ದಿನಾಂಕ: 18ನೇ ಜೂನ್ 2007**

ಮೆ. ಮನಾಲಿ ಶುಗರ್ಸ್ (ಲಿ), ರವರಿಗೆ ಉಲ್ಲೇಖ (1)ರಲ್ಲಿನ ಸರ್ಕಾರದ ಪತ್ರದಲ್ಲಿ ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ್ ತಾಲ್ಲೂಕು, ಯಲಗೂರುನಲ್ಲಿ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆಯ ಸ್ಥಾಪಿಸಲು ತಾತ್ವಿಕ ಅನುಮೋದನೆ ನೀಡಲಾಗಿದ್ದು, ಉಲ್ಲೇಖ (2) ಮತ್ತು (3)ರಲ್ಲಿನ ಪತ್ರಗಳಲ್ಲಿನ ಕೋರಿಕೆ ಮತ್ತು ಶಿಫಾರಸ್ಸಿನಂತೆ, ಈ ಕಾರ್ಖಾನೆ ಸ್ಥಾಪನೆ ಸ್ಥಳವನ್ನು ಮುದ್ದೇಬಿಹಾಳ್ ತಾಲ್ಲೂಕು, ಯಲಗೂರುನಿಂದ ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು, ಮಾಲಗಾನ್ ಎಂಬಲ್ಲಿಗೆ ಸ್ಥಳಾಂತರಿಸಿ, ಸ್ಥಾಪಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಮುಂದುವರಿದು, ಸಹವಿದ್ಯುತ್ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1160

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ದಿ. ಉಗಾರ್ ಶುಗರ್ ವರ್ಕ್ಸ್ (ಲಿ), ರವರು ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕಿನ ಮಳ್ಳಿ ಗ್ರಾಮದಲ್ಲಿ ಸ್ಥಾಪಿಸಲಿರುವ 15 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04 ದಿ: 16.03.05.
2 ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/91/ 2005-06 ದಿನಾಂಕ: 14.07.2006.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು, ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ದಿ. ಉಗಾರ್ ಶುಗರ್ ವರ್ಕ್ಸ್ (ಲಿ), ರವರು ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕಿನ ಮಳ್ಳಿ ಗ್ರಾಮದಲ್ಲಿ 15 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 96 ಎಸ್‌ಜಿಎಫ್ 06 ಬೆಂಗಳೂರು ದಿನಾಂಕ: 20ನೇ ಜೂನ್ 2007**

ದಿ. ಉಗಾರ್ ಶುಗರ್ ವರ್ಕ್ಸ್ (ಲಿ), ರವರು ಗುಲ್ಬರ್ಗಾ ಜಿಲ್ಲೆ, ಜೇವರ್ಗಿ ತಾಲ್ಲೂಕಿನ ಮಳ್ಳಿ ಗ್ರಾಮದಲ್ಲಿ 15 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04, ದಿನಾಂಕ: 16.03.2005ರಲ್ಲಿನ ನಿಬಂಧನೆ (ಅ)ನ್ನು ಸಡಿಲಿಸುವ ಮೂಲಕ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

ಮುಂದುವರೆದು ಸಹವಿದ್ಯುತ್ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1152

**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ .

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆ, ಭಾಲ್ಕಿ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ. ನಅಇ 145 ಎಂಐಬಿ 98, ದಿನಾಂಕ: 27.5.98
2 ಮುಖ್ಯಾಧಿಕಾರಿಗಳು, ಪುರಸಭಾ ಯೋಜನಾ ಪ್ರಾಧಿಕಾರ, ಭಾಲ್ಕಿ ಇವರ ಪತ್ರ ಸಂಖ್ಯೆ. ಪುಯೋಪ್ರಾ/ಭಾ/ಮಾ.ಪ್ಲಾ/2006-07/91, ದಿನಾಂಕ: 27.7.06.
3. ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ: ನಯೋ:ಉನಿ (ಯೋವಿ):ಮ.ಯೋ:5:07-08

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಭಾಲ್ಕಿ ಪಟ್ಟಣದ ಪುರಸಭಾ ಪಟ್ಟಣದ ಪುರಸಭಾ ಎಲ್ಲೆಯನ್ನೇ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಿ, ಪುರಸಭೆಯೇ ಯೋಜನಾ ಪ್ರಾಧಿಕಾರವಾಗಿ ಕಾರ್ಯನಿರ್ವಹಿಸಬೇಕೆಂದು ಅಧಿಸೂಚನೆ ಹೊರಡಿಸಿದೆ.

ಮೇಲೆ (2)ರ ಪತ್ರದಲ್ಲಿ ಪುರಸಭಾ ಯೋಜನಾ ಪ್ರಾಧಿಕಾರವು ಭಾಲ್ಕಿ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ 9 (1)ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ಭಾಲ್ಕಿ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯಂತೆ 35,093 ರಷ್ಟಿದ್ದು, 20 ವರ್ಷಗಳ ಯೋಜನಾ ಅವಧಿಗೆ ಅಂದರೆ, 2001ನೇ ಇಸವಿಗೆ 65,000 ಆಗಬಹುದೆಂದು ಅಂದಾಜಿಸಿ ಮಾಸ್ಟರ್ ಪ್ಲಾನ್ ತಯಾರಿಸಲಾಗಿದೆ. ಭಾಲ್ಕಿ ಪಟ್ಟಣದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆ ಸಂಚಾರ ಸಮಸ್ಯೆಗಳನ್ನು ವಿಶ್ಲೇಷಿಸಿ, ಯೋಜನಾ ತತ್ವಗಳನ್ನು ಆಧರಿಸಿ ಮತ್ತು ಮಾಸ್ಟರ್ ಪ್ಲಾನ್ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ 12ರಲ್ಲಿ ನಿಗಧಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಬೆಳವಣಿಗೆಗೆ ಅನುವಾಗುವಂತೆ ವಿವಿಧ ಉಪಯೋಗಗಳಿಗಾಗಿ ಭೂಮಿಯನ್ನು ಕಾಯ್ದಿರಿಸಿ ಮಹಾ ಯೋಜನೆಯನ್ನು ರೂಪಿಸಲಾಗಿದೆ. ಹಾಗೂ ಮಹಾ ಯೋಜನೆಯನ್ನು ಜಾರಿಗೆ ತರಲು ಅನುವಾಗುವಂತೆ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ

ಕಾಯ್ದೆಯ ಪ್ರಕರಣದ 13(1)ರನ್ವಯ ಸದರಿ ಯೋಜನೆಯನ್ನು ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 105 ಬೆಮಪ್ರಾ 2007, ಬೆಂಗಳೂರು, ದಿನಾಂಕ: 12ನೇ ಜೂನ್ 2007**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಭಾಲ್ಕಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣದ 13(1)ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1110

**ಬಿ.ಜಿ. ವಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಮೆ. ಕೀರ್ತಿ ಇಂಡಸ್ಟ್ರೀಸ್ (ಲಿ), ಹೈದರಾಬಾದ್ ರವರು ಗುಲ್ಬರ್ಗಾ ಜಿಲ್ಲೆ, ಯಾದಗೀರ್ ತಾಲ್ಲೂಕಿನ ಮಸ್ತೂರು ಗ್ರಾಮದಲ್ಲಿ ಸ್ಥಾಪಿಸಲಿರುವ 26 ಮೆ. ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04 ದಿ: 16.03.05.
2 ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/91/2005–06 ದಿನಾಂಕ: 16.06.2006 ಮತ್ತು 03.04.07.

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರಗಳಲ್ಲಿ ಮೆ. ಕೀರ್ತಿ ಇಂಡಸ್ಟ್ರೀಸ್ (ಲಿ), ಹೈದರಾಬಾದ್ ಗುಲ್ಬರ್ಗಾ ಜಿಲ್ಲೆ, ಯಾದಗೀರ್ ತಾಲ್ಲೂಕಿನ ಮಸ್ತೂರು ಗ್ರಾಮದಲ್ಲಿ 26 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 60 ಎಸ್‌ಜಿಎಫ್ 06, ಬೆಂಗಳೂರು, ದಿನಾಂಕ: 20ನೇ ಜೂನ್ 2007**

ಮೆ. ಕೀರ್ತಿ ಇಂಡಸ್ಟ್ರೀಸ್ (ಲಿ), ಹೈದರಾಬಾದ್ ರವರು ಗುಲ್ಬರ್ಗಾ ಜಿಲ್ಲೆ ಯಾದಗೀರ್ ತಾಲ್ಲೂಕಿನ ಮಸ್ತೂರು ಗ್ರಾಮದಲ್ಲಿ 26 ಮೆ. ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 3500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04, ದಿನಾಂಕ: 16.03.2005ರಲ್ಲಿನ ನಿಬಂಧನೆ (ಅ)ನ್ನು ಸಡಿಲಿಸುವ ಮೂಲಕ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

ಮುಂದುವರೆದು ಸಹವಿದ್ಯುತ್ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1153

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಹಾವೇರಿ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾದ ಮಹಾಯೋಜನೆ (ಪರಿಷ್ಕೃತ–1)ಗೆ ಸರ್ಕಾರವು ತಾತ್ಕಾಲಿಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ:**
1 ಸರ್ಕಾರದ ಆದೇಶದ ಸಂಖ್ಯೆ: ನಅಇ 74 ಬೆಮಪ್ರಾ 2000, ಬೆಂಗಳೂರು ದಿನಾಂಕ 26–02–2001.
2 ಆಯುಕ್ತರು, ಹಾವೇರಿ ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ: ಹಾನಪ್ರಾ/ಮಯೋಪ(1) 2007–08/13 ದಿನಾಂಕ: 10–04–2007.

3. ನಗರ ಯೋಜನಾ ನಿರ್ದೇಶಕರು ಕಛೇರಿಯ ಏಕ ಕಡತ ಸಂಖ್ಯೆ: ನಯೋ.(10)/ಉನಿ/ ಹಾವೇರಿ ಮ.ಯೋ (ಪ–1) ತಾತ್ಕಾಲಿಕ/2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಹಾವೇರಿ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಅಂತಿಮ ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಹಾವೇರಿ ನಗರಾಭಿವೃದ್ಧಿ ಪ್ರಾಧಿಕಾರವು ಹಾವೇರಿ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(ಡಿ)ರನ್ವಯ ಪರಿಷ್ಕರಿಸಿ, ಮಹಾಯೋಜನೆ (ಪರಿಷ್ಕೃತ–1)ಯನ್ನು ತಯಾರಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಹಾವೇರಿ ನಗರದ ಜನಸಂಖ್ಯೆ: 2021ರಲ್ಲಿ 1,25,000ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾಯೋಜನೆ (ಪರಿಷ್ಕೃತ–1)ಯನ್ನು ತಯಾರಿಸಲಾಗಿದೆ. ಹಾವೇರಿ ನಗರದ ಸ್ಥಳೀಯ ಯೋಜನಾ ಪ್ರದೇಶದ 10408.00 ಹೆಕ್ಟೇರ್ ಪ್ರದೇಶದಲ್ಲಿ 1309.65 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾಯೋಜನೆಯನ್ನು ರೂಪಿಸಲಾಗಿದೆ. ಹಾವೇರಿ ನಗರದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾಯೋಜನೆಯ ತಯಾರಿಕೆಯ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣದ 9 ರಿಂದ 12ರಲ್ಲಿನ ಅಂಶಗಳನ್ನು ಪರಿಗಣಿಸಿ ಯೋಜಿಸಿ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 1309.65 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 676.56 ಹೆಕ್ಟೇರ್ (ಶೇ. 51.66), ವಾಣಿಜ್ಯಕ್ಕಾಗಿ 70.54 ಹೆಕ್ಟೇರ್ (ಶೇ. 5.38), ಕೈಗಾರಿಕೆಗಾಗಿ 68.14 ಹೆಕ್ಟೇರ್ (ಶೇ. 5.20) ಸಾರ್ವಜನಿಕ / ಅರೆ ಸಾರ್ವಜನಿಕ ವಲಯಕ್ಕಾಗಿ 78.96 ಹೆಕ್ಟೇರ್ (ಶೇ. 6.03) ಉದ್ಯಾನವನ / ಬಯಲು ಜಾಗಗಳಿಗಾಗಿ 146.01 ಹೆಕ್ಟೇರ್ (ಶೇ. 11.16), ನಾಗರೀಕ ಸೌಲಭ್ಯಕ್ಕಾಗಿ 16.94 ಹೆಕ್ಟೇರ್ (ಶೇ. 1.29) ಹಾಗೂ ಸಾರಿಗೆ / ಸಂಪರ್ಕ ವಲಯಕ್ಕಾಗಿ 252.49 ಹೆಕ್ಟೇರ್ (ಶೇ. 19.28) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾಯೋಜನೆ (ಪರಿಷ್ಕೃತ–1)ಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(1)ರನ್ವಯ ನಗರ ಯೋಜನಾ ನಿರ್ದೇಶಕರು ಕೆಲವೊಂದು ನಿಬಂಧನೆಗಳಿಗೊಳಪಡಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 124 ಬೆಮಪ್ರಾ 2007, ಬೆಂಗಳೂರು, ದಿನಾಂಕ: 15ನೇ ಜೂನ್ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಹಾವೇರಿ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆ (ಪರಿಷ್ಕೃತ–1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(1)ರನ್ವಯ ಈ ಕೆಳಕಂಡ ನಿಬಂಧನೆಗಳಿಗೊಳಪಡಿಸಿ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾಯೋಜನೆ (ಪರಿಷ್ಕೃತ–1)ಯ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸುವಾಗ ಈ ಕೆಳಕಂಡ ಅಂಶಗಳ ಬಗ್ಗೆ ಮಹಾಯೋಜನೆಯನ್ನು ಅಳವಡಿಸಿ ಸಲ್ಲಿಸತಕ್ಕದ್ದು.

1. ಮಹಾಯೋಜನೆ (ಪರಿಷ್ಕೃತ–1)ಯ ವರದಿಯಲ್ಲಿನ ನ್ಯೂನತೆಗಳನ್ನು ಸರಿಪಡಿಸಿ, ವರದಿಯ ದಾಟಿಯನ್ನು ಸುಧಾರಿಸಿ ಸಲ್ಲಿಸತಕ್ಕದ್ದು.
2. ಮಹಾಯೋಜನೆಯ ಪ್ರಸ್ತಾಪಿತ ಭೂ ಬಳಕೆ ನಕ್ಷೆಯಲ್ಲಿ ರೈಲ್ವೆ ಬೌಂಡರಿಯಿಂದ ಎರಡೂ ಕಡೆ 30 ಮೀ. ಬಫರ್ ಬಿಟ್ಟು ಭೂ ಉಪಯೋಗಗಳನ್ನು ಪ್ರಸ್ತಾಪಿಸುವುದು.
3. ಯೋಜನಾ ಜಿಲ್ಲೆ–(4)ರಲ್ಲಿ ರಿ.ಸ.ನಂ. 318ರಲ್ಲಿ ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕಾಗಿ ಕಾಯ್ದಿರಿಸತಕ್ಕದ್ದು.

ಮಹಾಯೋಜನೆ (ಪರಿಷ್ಕೃತ–1)ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1147

**ಬಿ.ಜಿ. ವಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ವಿಷಯ:** ಗುಲ್ಬರ್ಗಾ ಜಿಲ್ಲೆ, ಸೇಡಂ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 8 ಗುಅಪ್ರಾ 2001, ಬೆಂಗಳೂರು ದಿನಾಂಕ: 3–8–2001.
2. ಸದಸ್ಯ ಕಾರ್ಯದರ್ಶಿಗಳು ಹಾಗೂ ಮುಖ್ಯಾಧಿಕಾರಿಗಳು, ಪುರಸಭೆ ಯೋಜನಾ ಪ್ರಾಧಿಕಾರದ ಪತ್ರದ ಸಂ. ಪುಸಸೇ:ಮಾ.ಷಾ: 2007–08:1–3, ದಿನಾಂಕ: 3–5–2007.
3. ನಗರ ಯೋಜನಾ ನಿರ್ದೇಶಕರು, ಬೆಂಗಳೂರು ಇವರ ಕಛೇರಿಯ ಕಡತ ಸಂಖ್ಯೆ: ನಯೋ.ಉನಿ(ಯೋ.ವಿ) ಸೇಡಂ: ಮ.ಯೋ: 29:2007–08

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರಿ ಅಧಿಸೂಚನೆಯಲ್ಲಿ ಸೇಡಂ ಯೋಜನಾ ಪ್ರದೇಶದ ಮಾಸ್ಟರ್ ಪ್ಲಾನ್‌ಗೆ ತಾತ್ಕಾಲಿಕ ಅನುಮೋದನೆ ನೀಡಿ ಆದೇಶಿಸಿದೆ. ಮೇಲೆ ಓದಲಾದ ಉಲ್ಲೇಖ (2)ರ ಪತ್ರದಲ್ಲಿ ಸೇಡಂ ಪುರಸಭೆ ಯೋಜನಾ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಗಳು ಹಾಗೂ ಮುಖ್ಯಾಧಿಕಾರಿಗಳು, ಸೇಡಂ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲು ಕೋರಿರುತ್ತಾರೆ. ಮೇಲೆ ಓದಲಾದ ಉಲ್ಲೇಖ (3)ರ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಮಹಾ ಯೋಜನೆಯನ್ನು ಪರಿಶೀಲಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಬಹುದಾಗಿ ಅಭಿಪ್ರಾಯ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸೇಡಂ ಪಟ್ಟಣ ಜನಸಂಖ್ಯೆಯು 2001ರಲ್ಲಿ 31,539 ಇದ್ದು 20 ವರ್ಷಗಳ ಯೋಜನಾ ಅವಧಿಗೆ ಅಂದರೆ, 2021ನೇ ಇಸವಿಗೆ 62,000 ಆಗಬಹುದೆಂದು ಅಂದಾಜಿಸಿ ಮಾಸ್ಟರ್ ಪ್ಲಾನ್ ಅನ್ನು ತಯಾರಿಸಲಾಗಿದೆ. ಸ್ಥಳೀಯ ಯೋಜನಾ ಪ್ರದೇಶದ 2189 ಹೆಕ್ಟೇರ್ ವಿಸ್ತೀರ್ಣದಲ್ಲಿ 775 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 775 ಹೆಕ್ಟೇರ್ ವಿಸ್ತೀರ್ಣದ ಪ್ರದೇಶದಲ್ಲಿ ವಸತಿಗಾಗಿ ಶೇಕಡ 35.65 ವಾಣಿಜ್ಯಕ್ಕೆ ಶೇಕಡ 3.95 ಕೈಗಾರಿಕೆಗೆ ಶೇಕಡ 18..74 ಸಾರ್ವಜನಿಕ; ಅರೆ ಸಾರ್ವಜನಿಕಕ್ಕೆ ಶೇಕಡ 4.39, ಉದ್ಯಾನವನ ಮತ್ತು ಬಯಲು ಜಗಕ್ಕೆ ಶೇಕಡ 9.84 ನಾಗರೀಕ ಸೌಲಭ್ಯಕ್ಕೆ ಶೇಕಡ 0.24 ಹಾಗೂ ಸಾರಿಗೆ ಸಂಪರ್ಕಕ್ಕೆ ಶೇಕಡ 27.19 ವಿಸ್ತೀರ್ಣವನ್ನು ನಿಗದಿ ಪಡಿಸಲಾಗಿದೆ. ಹಾಗೂ ಯೋಜನೆಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 129 ಬೆಮಪ್ರಾ 2007, ಬೆಂಗಳೂರು, ದಿನಾಂಕ: 15ನೇ ಜೂನ್ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಗುಲ್ಬರ್ಗಾ ಜಿಲ್ಲೆ, ಸೇಡಂ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1146

**ಬಿ.ಜಿ. ವಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ವಿಷಯ:** ಹಾವೇರಿ ಜಿಲ್ಲೆ ರಾಣಿಬೆನ್ನೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ (ಪರಿಷ್ಕೃತ–1)ಗೆ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ನಅಇ 56 ಬೆಮಪ್ರಾ 2003, ಬೆಂಗಳೂರು ದಿನಾಂಕ 17–02–2003.
2. ರಾಣಿಬೆನ್ನೂರು ನಗರ ಯೋಜನಾ ಪ್ರಾಧಿಕಾರದ ಪತ್ರದ ಸಂಖ್ಯೆ: ನಯೋಪ್ರಾರಾ/ನಯೋ/39/2007–08
3. ನಗರ ಯೋಜನಾ ನಿರ್ದೇಶಕರು ಕಛೇರಿಯ ಏಕ ಕಡತ ಸಂಖ್ಯೆ: ನಯೋ (10)/ಉನಿ1/ರಾಣಿಬೆನ್ನೂರು ಮ.ಯೋ (ಪ–1)/ ತಾತ್ಕಾಲಿಕ/2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಹಾವೇರಿ ಜಿಲ್ಲೆ, ರಾಣಿಬೆನ್ನೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಅಂತಿಮ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ರಾಣಿಬೆನ್ನೂರು ನಗರ ಯೋಜನಾ ಪ್ರಾಧಿಕಾರವು ರಾಣಿಬೆನ್ನೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ. 13(ಡಿ) ರನ್ವಯ ಪರಿಷ್ಕರಿಸಿ, ಮಹಾಯೋಜನೆಗೆ (ಪರಿಷ್ಕೃತ–1)ಯನ್ನು ರೂಪಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ರಾಣಿಬೆನ್ನೂರು ಪಟ್ಟಣದ ಜನಸಂಖ್ಯೆಯು 2021ರಲ್ಲಿ 1,59,000ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾಯೋಜನೆ (ಪರಿಷ್ಕೃತ–1)ಯನ್ನು ರೂಪಿಸಲಾಗಿದೆ. ರಾಣಿಬೆನ್ನೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ 19,633.99 ಹೆಕ್ಟೇರ್ ಪ್ರದೇಶದಲ್ಲಿ ಒಟ್ಟು 1784.80 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾಯೋಜನೆಯನ್ನು ತಯಾರಿಸಲಾಗಿದೆ. ರಾಣಿಬೆನ್ನೂರು ಪಟ್ಟಣದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾಯೋಜನೆಯ ತಯಾರಿಕೆಯ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ (9)ರಿಂದ (12)ರವರೆಗೆ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 1784.80 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 898.72 ಹೆಕ್ಟೇರ್ (ಶೇ. 50.36), ವಾಣಿಜ್ಯಕ್ಕಾಗಿ 92.58 ಹೆಕ್ಟೇರ್ (ಶೆ. 5.18), ಕೈಗಾರಿಕೆಗಾಗಿ 103.21 ಹೆಕ್ಟೇರ್ (ಶೇ. 5.78), ಉದ್ಯಾನವನ / ಬಯಲು ಜಾಗಗಳಿಗಾಗಿ 218.40 ಹೆಕ್ಟೇರ್ (ಶೇ. 12.23), ಸಾರ್ವಜನಿಕ / ಅರೆ ಸಾರ್ವಜನಿಕ ಉಪಯೋಗಕ್ಕಾಗಿ 117.23 ಹೆಕ್ಟೇರ್ (ಶೇ. 6.56) ಹಾಗೂ ಸಾರಿಗೆ / ಸಂಪರ್ಕ ವಲಯಕ್ಕಾಗಿ 348.79 ಹೆಕ್ಟೇರ್ (ಶೇ. 19.56) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾಯೋಜನೆ (ಪರಿಷ್ಕೃತ–1)ಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 125 ಬೆಮಪ್ರಾ 2007, ಬೆಂಗಳೂರು, ದಿನಾಂಕ: 15ನೇ ಜೂನ್ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ರಾಣಿಬೆನ್ನೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆ (ಪರಿಷ್ಕೃತ–1)ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣದ 13(1)ರನ್ವಯ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾಯೋಜನೆ (ಪರಿಷ್ಕೃತ–1)ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1145

**ಬಿ.ಜಿ. ವಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ವಿಷಯ:** ಗುಲ್ಬರ್ಗಾ ಜಿಲ್ಲೆಯ ಶಹಾಪುರ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಅಂತಿಮ ಅನುಮೋದನೆಯನ್ನು ನೀಡುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ನಅಇ 54 ಗುಅಪ್ರಾ 2004, ಬೆಂಗಳೂರು ದಿನಾಂಕ 25–06–2005
2. ಸದಸ್ಯ ಕಾರ್ಯದರ್ಶಿ, ನಗರ ಯೋಜನಾ ಪ್ರಾಧಿಕಾರ, ಶಹಪುರ ಇವರ ಪತ್ರ ಸಂಖ್ಯೆ: ನಯೋಪ್ರಾಶ:ಮ.ಯೋ: 2007–08/5–6 ದಿನಾಂಕ: 7–5–2007.
3. ನಗರ ಯೋಜನಾ ನಿರ್ದೇಶಕರು ಕಛೇರಿಯ ಏಕ ಕಡತ ಸಂಖ್ಯೆ: ನಯೋ.ಉನಿ (ಯೋ.ವಿ) ಶಹಾಪುರ:ಮ.ಯೋ. 30:2007–08.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶಹಾಪುರ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಶಹಾಪುರ ನಗರ ಯೋಜನಾ ಪ್ರಾಧಿಕಾರವು ಶಹಾಪೂರ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ ಅಂತಿಮ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಶಹಾಪೂರ ಸ್ಥಳೀಯ ಯೋಜನಾ ಪಟ್ಟಣದ ಜನಸಂಖ್ಯೆಯು 2001ರಲ್ಲಿ 38,907 ಇದ್ದು, 20 ವರ್ಷಗಳ ಯೋಜನಾ ಅವಧಿಗೆ ಅಂದರೆ, 2021ನೇ ಇಸವಿಗೆ 82,500 ಆಗಬಹುದೆಂದು ಅಂದಾಜಿಸಿ ಮಹಾಯೋಜನೆಯನ್ನು ತಯಾರಿಸಲಾಗಿದೆ. ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 9,816.59 ಹೆಕ್ಟೇರ್ ವಿಸ್ತೀರ್ಣದಲ್ಲಿ 1250 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಶಹಾಪುರ ಪಟ್ಟಣದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಗಳ ಗತಿ, ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ, ಯೋಜನಾ ತತ್ವಗಳಿಗನುಗುಣವಾಗಿ ಹಾಗೂ ಮಾಸ್ಟರ್ ಪ್ಲಾನ್ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 9 ರಿಂದ 12ರವರೆಗೆ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ನಗರದ ಮುಂದಿನ ಬೆಳವಣಿಗೆಗೆ, ವಿವಿಧ, ಉಪಯೋಗಗಳಿಗೆ ಬೇಕಾಗಬಹುದಾದ ಭೂಮಿಯನ್ನು ಈ ಕೆಳಗಿನಂತೆ ಕಾಯ್ದಿರಿಸಿ ಮಹಾಯೋಜನೆ ತಯಾರಿಸಲಾಗಿದೆ.

ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು, 1250.00 ವಿಸ್ತೀರ್ಣದ ಪ್ರದೇಶದಲ್ಲಿ ವಸತಿಗಾಗಿ ಶೇಕಡ 47.87, ವಾಣಿಜ್ಯಕ್ಕೆ ಶೇಕಡ 7.62, ಕೈಗಾರಿಕೆಗೆ ಶೇಕಡ 3.93, ಸಾರ್ವಜನಿಕ:ಅರೆ ಸಾರ್ವಜನಿಕಕ್ಕೆ ಶೇಕಡ 11.03, ಉದ್ಯಾನವನ ಮತ್ತು ಬಯಲು ಜಾಗಕ್ಕೆ ಶೇಕಡ 15.79, ನಾಗರೀಕ ಸೌಲಭ್ಯಕ್ಕೆ ಶೇಕಡ 0.51 ಹಾಗೂ ಸಾರಿಗೆ ಮತ್ತು ಸಂಪರ್ಕಕ್ಕಾಗಿ ಶೇಕಡ 13.25 ವಿಸ್ತೀರ್ಣವನ್ನು ನಿಗಧಿಪಡಿಸಲಾಗಿದೆ. ಹಾಗೂ ಯೋಜನೆಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣದ 13(2)ರನ್ವಯ ಸರ್ಕಾರದ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 123 ಬೆಮಪ್ರಾ 2007, ಬೆಂಗಳೂರು, ದಿನಾಂಕ: 15ನೇ ಜೂನ್ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶಹಾಪೂರ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣದ 13(3)ರನ್ವಯ ಅಂತಿಮ ಅನಮೋದನೆಯನ್ನು ನೀಡಲಾಗಿದೆ.

ಮಹಾಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1144

**ಬಿ.ಜಿ. ವಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ವಿಷಯ:** ಚಾಮರಾಜನಗರದಲ್ಲಿ ನಗರಸಭಾ ಕಛೇರಿ ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ–ಆದೇಶ.

**ಓದಲಾಗಿದೆ:** ಜಿಲ್ಲಾಧಿಕಾರಿ ಹಾಗೂ ಆಡಳಿತಾಧಿಕಾರಿ ನಗರಸಭೆ ಚಾಮರಾಜನಗರ, ಇವರ ಪತ್ರ ಸಂ: ಸಿಬ್ಬಂದಿ/ಸಿಆರ್–17/2007–08, ದಿನಾಂಕ: 22–05–2007

**ಪ್ರಸ್ತಾವನೆ:**

ಚಾಮರಾಜನಗರಿ ಜಿಲ್ಲಾಧಿಕಾರಿ ಹಾಗೂ ಚಾಮರಾಜನಗರ ನಗರಸಭೆ ಆಡಳಿತಾಧಿಕಾರಿ, ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ಥಾವನೆ ಸಲ್ಲಿಸಿ ಪ್ರಸ್ತುತ ಚಾಮರಾಜನಗರದಲ್ಲಿ ನಗರಸಭೆ ಕಛೇರಿಯು ವಾಣಿಜ್ಯ ಸಂಕೀರ್ಣದಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಜನಜಂಗುಳಿಯಿಂದ ವಾಹನಗಳ ಸಂಚಾರ ಹಾಗೂ ಶಬ್ಧ ಮಾಲಿನ್ಯದಿಂದ ಕೂಡಿದ್ದು ಕಛೇರಿಯ ದೈನಂದಿನ ಕೆಲಸಗಳಿಗೆ ತುಂಬಾ ಅನಾನುಕೂಲವಾಗಿರುವುದಾಗಿ ತಿಳಿಸುತ್ತಾ, ಚಾಮರಾಜನಗರದ ಸಂತೇಮರಳ್ಳಿ ವೃತ್ತದಲ್ಲಿ ಅಸೆಸ್‌ಮೆಂಟ್ ಸಂ: 222/209ರ 123X110 ಅಡಿಗಳ ವಿಸ್ತೀರ್ಣದ ನಗರಸಭಾ ನಿವೇಶನದಲ್ಲಿ ರೂ. 1,50,00,000–00 (ಒಂದು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳ ವೆಚ್ಚದಲ್ಲಿ ಹೊಸ ಕಟ್ಟಡವನ್ನು ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿದ್ದಾರೆ. ಸದರಿ ಕಟ್ಟಡ ನಿರ್ಮಾಣಕ್ಕೆ ತಗಲುವ ವೆಚ್ಚವನ್ನು ಸರ್ಕಾರದಿಂದ ನಗರಸಭೆಗೆ ಕಾಲಕಾಲಕ್ಕೆ ಬಿಡುಗಡೆ ಆಗುವ ಎಸ್.ಎಫ್.ಸಿ (Untied) ಅನುದಾನದಲ್ಲಿ ಭರಿಸಲಾಗುವುದೆಂದು ತಿಳಿಸಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 164 ಜಿಇಎಲ್ 2007 ಬೆಂಗಳೂರು ದಿನಾಂಕ: 24ನೇ ಮೇ 2007**

ಪ್ರಸ್ತಾವನೆಯಲ್ಲಿನ ವಿವರಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಚಾಮರಾಜನಗರದ ಸಂತೇಮರಳ್ಳಿ ವೃತ್ತದಲ್ಲಿರುವ ಅಸೆಸ್ಮೆಂಟ್ ನಂ: 222/209ರ 123x110 ಅಡಿಗಳ ವಿಸ್ತೀರ್ಣದ ನಗರಸಭಾ ನಿವೇಶನದಲ್ಲಿ ರೂ. 1,50,00,000–00 (ಒಂದು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳ ವೆಚ್ಚದಲ್ಲಿ ನಗರಸಭೆ ಹೊಸ ಕಟ್ಟಡವನ್ನು

ಸರ್ಕಾರದಿಂದ ನಗರಸಭೆಗೆ ಕಾಲಕಾಲಕ್ಕೆ ಬಿಡುಗಡೆ ಆಗುವ ಎಸ್.ಎಫ್.ಸಿ (Untied) ಅನುದಾನದಿಂದ ನಿರ್ಮಿಸುವ ಷರತ್ತಿಗೊಳಟ್ಟು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 999

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**INFRASTRUCTURE DEVELOPMENT SECRETARIAT**

**Sub:** Setting up of PPP Cell in the Infrastructure Development Department and constitution of State Level Single Window Agency.

**Read :** 1 Joint Secretary to Government of India's D.O. letter No. 1/24/2006-PPP dated 7th February 2007.

2 Proceedings of the meeting held on 21-3-2007 under the Chairmanship of the Chief Secretary.

**Preamble:**

The Ministry of Finance, Government of India has advised the State Government to set up a Public Private Partnership (PPP) Cell and designate a Secretary level Officer as PPP nodal officer for the State. In response to this, a meeting was convened on 21st March 2007 under the Chairmanship of the Chief Secretary, Government of Karnataka and it was decided to set up a PPP Cell in the Infrastructure Development Department (IDD) with the Principal Secretary, IDD as the nodal officer. This cell would be staffed with appropriate professional/technical experts to assist the Government in formulating processing, evaluating and monitoring the PPP projects. The scope of work of PPP Cell was discussed and finalised in this meeting.

2. It was also decided to constitute a State Level Single Window Agency under the Chairmanship of the Chief Secretary to approve the PPP projects up to Rs. 50 crore and to recommend the projects above Rs. 50 crore to the State High Level Committee under the Chairmanship of the Chief Minister constituted under section 3 of the Karnataka Industries (Facilitation) Act 2002.

3. The State Government, after examining the recommendations of Government of India on PPPs, is pleased to issue the following order.

**Government Order No. IDD 5 UIP 2006 (P) Bangalore, dated 18th June 2007.**

In the circumstances explained in the preamble, the Government of Karnataka accords approval for setting up of a PPP Cell in the Infrastructure Development Department. The Cell will be headed by the Principal Secretary, Infrastructure Development Department and the Director, IDD and professional experts. The Infrastructure Development Corporation (Karnataka) Limited (IDeCK) will provide technical advice and support to the PPP Cell which will have other supporting from the Secretariat. This Cell may also engage consultants as and when necessary.

2. The Functions of the PPP Cell would be as follows:

a) To identify, conceptulize and create a shelf of projects in consultation with the line Departments and recommend approval of suitable projects for implementation of PPP route.
b) To assist different Government Departments in preparing the pre-feasiblity reports through consultants.
c) To assist the respective Departments in preparing the Detailed Project Reports.
d) To appoint / select consultants to develop the projects in consultation with the concerned Department.
e) The help respective Department to conduct the bidding process for selection of developers.
f) To interact with the government of India and other funding agencies for obtaining their support.

g) To act as the nodal agency for capacity building for PPP in the state, conduct/recommend exposure visits and training programmes on PPP.

h) To develop internal evaluation guidelines in consultation with the respective Departments to evaluate and assess the projects whether the projects are to be funded by the State Government, or implemented with Private Sector participation.

i) To recommend projects to Government of India for grants under Viability Gap Funding Scheme.

j) To inspect visit, review and monitor any PPP Project under implementation in the State.

3. State Level Single Window Agency

Approval is also accorded to constitute a Single Window Agency (SWA) at the State Level under the Chairmanship of the Chief Secretary to approve the PPP projects up to Rs. 50 crore and to recommend the project above Rs. 50 crore to te State High Level Committee under the Chairmanship of the Chief Minister constituted under section 3 of the Karnataka Industries (Facilitation) Act 2002.

3.1 The PPP Cell will be the nodal agency to receive the proposals in respect of the PPP Projects and place them before the SWA for consideration and approval. The Committee shall examine and consider the PPP proposals relating to any Department in the State.

3.2 The Committee shall consist of the following members:

1. Chief Secretary – Chairman
2. Additional Chief Secretary – Member
3. ACS & Development Commissioner – Member
4. Principal Secretary, Planning Department – Member
5. Principal Secretary, Finance Department – Member
6. Principal Secretary, Commerce & Industries Department – Member
7. Principal Secretary, PWD Department – Member
8. Principal Secretary, Urban Development Department – Member
9. Principal Secretary of the Department concerned with PPP Project – Member
10. Principal Secretary, Infrastructure Development Department – Member Secretary

The Chairman of the Committee may co-opt / invite additional members as and when required.

By order and in the Name of the Governor of Karnataka

**SHIDRAMAPPA H TALAWAR**

PR. 1148

Under Secretary to Government (I/c)

Infrastruecture Development Department.

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ:** 2007–08ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಅರುಣೋದಯ ಇನ್ಸಿಟಿಟ್ಯೂಟ್ ಆಫ್ ಲೀಗಲ್ ಸ್ಟಡೀಸ್‌ನ 03 ವರ್ಷದ ಎಲ್.ಎಲ್.ಬಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ.

**ಉಲ್ಲೇಖ:**
1 ಸರ್ಕಾರದ ಆದೇಶ ಸಂಖ್ಯೆ: ಇಡಿ 211 ಯುಬಿಐ 2005, ದಿ: 7–7–2005.
2 ಬಿ.ಸಿ.ಐ. ಪತ್ರ ದಿನಾಂಕ: 16–10–2005.
3 ಸರ್ಕಾರದ ಪತ್ರ ಸಂಖ್ಯೆ: ಇಡಿ 82 ಯುಬಿಐ 2007, ದಿ: 1–6–2006.
4 ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರ ಪತ್ರ ಸಂಖ್ಯೆ: ಎಸಿಎ–3/ಎ3/ಅಕಾ/2007–08, ದಿನಾಂಕ: 31–8–2007.

**ಪೀಠಿಕೆ:–**

1) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಅರುಣೋದಯ ಎಜುಕೇಷನ್ ಟ್ರಸ್ಟ್, ಅರುಣೋದಯ ಇನ್ಸಿಟಿಟ್ಯೂಟ್ ಆಫ್ ಲೀಗಲ್ ಸ್ಟಡೀಸ್‌ನ್ನು 80 ವಿದ್ಯಾರ್ಥಿ ಪ್ರಮಾಣದೊಂದಿಗೆ 03 ವರ್ಷದ ಎಲ್‌ಎಲ್‌ಬಿ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 18–10–2007ರ ಪತ್ರದಲ್ಲಿ ಬೆಂಗಳೂರಿನ ಅರುಣೋದಯ ಎಜುಕೇಷನ್ ಟ್ರಸ್ಟ್, ಅರುಣೋದಯ ಇನ್ಸಿಟಿಟ್ಯೂಟ್ ಆಫ್ ಲೀಗಲ್ ಸ್ಟಡೀಸ್‌ನ್ನು 160 ವಿದ್ಯಾರ್ಥಿ ಪ್ರಮಾಣದೊಂದಿಗೆ 03 ವರ್ಷದ ಎಲ್‌ಎಲ್.ಬಿ. ಕೋರ್ಸನ್ನು ಪ್ರಾರಂಭಿಸಲು 2006–07ನೇ ಸಾಲಿನಿಂದ ಅನ್ವಯವಾಗುವಂತೆ ಅನುಮೋದನೆ ನೀಡಿತ್ತು. ಉಲ್ಲೇಖ (3) ರಲ್ಲಿರುವ ಸರ್ಕಾರದ ಪತ್ರದಲ್ಲಿ ಮೇಲ್ಕಂಡ ಸಂಸ್ಥೆಯು ಅರುಣೋದಯ ಇನ್ಸಿಟಿಟ್ಯೂಟ್ ಆಫ್ ಲೀಗಲ್ ಸ್ಟಡೀಸ್‌ನ್ನು 2006–07ನೇ ಸಾಲಿನಿಂದ 03 ವರ್ಷದ ಎಲ್‌ಎಲ್.ಬಿ.

ಕೋರ್ಸನ್ನು 160 ವಿದ್ಯಾರ್ಥಿ ಪ್ರಮಾಣದೊಂದಿಗೆ (80 ವಿದ್ಯಾರ್ಥಿಗಳ ಎರಡು ತರಗತಿಗಳು) ಪ್ರಾರಂಭಿಸಲು ಸಂಯೋಜನೆಯನ್ನು ನೀಡಲಾಗಿತ್ತು ಹಾಗೂ ಕಾಲೇಜು ಪ್ರಾರಂಭಗೊಂಡ ತರುವಾಯ ವಿಶ್ವವಿದ್ಯಾಲಯವು ಸದರಿ ಕಾಲೇಜಿಗೆ ಸ್ಥಳೀಯ ವಿಚಾರಣಾ ಸಮಿತಿಯನ್ನು ಕಳುಹಿಸಿ ಕಾಲೇಜಿನಲ್ಲಿ 160 ವಿದ್ಯಾರ್ಥಿ ಪ್ರಮಾಣಕ್ಕೆ ಅವಶ್ಯಕವಿರುವ ಮೂಲ ಸೌಕರ್ಯಗಳು ಇರುವ ಬಗ್ಗೆ ಖಚಿತಪಡಿಸಿದ ನಂತರ 2007-08ನೇ ಸಾಲಿನಲ್ಲಿ ಕಾಲೇಜಿನ ಎಲ್‌ಎಲ್.ಬಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ನಿರ್ಧರಿಸಲಾಗುವುದು ಎಂದು ಷರತ್ತನ್ನು ವಿಧಿಸಲಾಗಿತ್ತು. ಉಲ್ಲೇಖ (4)ರಲ್ಲಿರುವ ಪತ್ರದಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಸರ್ಕಾರದ ಸೂಚನೆಯಂತೆ ಕಾಲೇಜಿಗೆ ಸ್ಥಳೀಯ ವಿಚಾರಣಾ ಸಮಿತಿಯನ್ನು ದಿ: 10-2-2007 ರಂದು ಕಳುಹಿಸಿ ವರದಿಯನ್ನು ಪಡೆದಿದ್ದು ಸಮಿತಿಯು ಸದರಿ ವರದಿಯಲ್ಲಿ ಮೇಲ್ಕಂಡ ಕಾಲೇಜಿನಲ್ಲಿ 03 ವರ್ಷದ ಎಲ್‌ಎಲ್.ಬಿ. ಕೋರ್ಸಿಗೆ 160 ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಬಹುದೆಂದು ಶಿಫಾರಸ್ಸು ಮಾಡಿದ್ದು ಸದರಿ ವರದಿಯನ್ನು ದಿನಾಂಕ: 26-3-2007ರಂದು ಜರುಗಿದ ವಿದ್ಯಾವಿಷಯಕ ಪರಿಷತ್ ಮತ್ತು ದಿನಾಂಕ: 7-4-2007 ರಂದು ಜರಗಿದ ಸಿಂಡಿಕೇಟ್ ಸಭೆಯಲ್ಲಿ ಅನುಮೋದಿಸಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 461 ಯುಬಿವಿ 2007, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2007**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಬೆಂಗಳೂರಿನ ಅರುಣೋದಯ ಎಜುಕೇಷನ್ ಟ್ರಸ್ಟ್‌ನ ಅರುಣೋದಯ ಇನ್ಸಿಟಿಟ್ಯೂಟ್ ಆಫ್ ಲೀಗಲ್ ಸ್ಟಡೀಸ್ 03 ವರ್ಷದ ಎಲ್‌ಎಲ್.ಬಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 160 (80 ವಿದ್ಯಾರ್ಥಿಗಳ ಎರಡು ತರಗತಿಗಳು) ಕ್ಕೆ 2007-08ನೇ ಸಾಲಿನಿಂದ ನಿಗದಿಪಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1998

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ವಸತಿ ಸಚಿವಾಲಯ**

**ವಿಷಯ:** 2007-08ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 3ನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:**

1 ಸರ್ಕಾರದ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು, ದಿನಾಂಕ: 26-06-2007.

2 ಸರ್ಕಾರ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು, ದಿನಾಂಕ: 27-09-2007.

3 ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೆಕೊನಿಮ/ಲೆಪಶಾ/ಅನುದಾನ: 2007-08, ದಿನಾಂಕ: 26-10-2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ. 117.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 836.07 ಲಕ್ಷಗಳು ಒಟ್ಟು ರೂ. 953.57 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (2)ರಲ್ಲಿ ಎರಡನೇ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ. 117.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 835.33 ಲಕ್ಷಗಳು ಒಟ್ಟು ರೂ 952.83 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (3)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2007-08ನೇ ಸಾಲಿನ ಮೂರನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 112.50 ಲಕ್ಷಗಳು, ಕೊಳಚೆ ಸುಧಾರಣೆ-ಸಹಾಯ ಧನ ರೂ. 67.50 ಲಕ್ಷಗಳು, ಹಾಗೂ ಹುಡ್ಕೋ ಸಾಲಗಳ ಹಾಗೂ ಯೋಜನೇತರಡಿಯಲ್ಲಿ ರೂ. 805.29 ಲಕ್ಷಗಳು ಒಟ್ಟು ರೂ. 922.79 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಹುಡ್ಕೋ ಸಾಲಗಳ ಮೇಲುಸ್ತುವಾರಿ ರೂ. 742.79ನ್ನು ಬಿಟ್ಟು, ಉಳಿದ ಲೆಕ್ಕ ಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಹಾಗೂ ಕೊಳಚೆ ಸುಧಾರಣೆ ಸಹಾಯಧನ ಇವುಗಳಲ್ಲಿನ ಯೋಜನೆ ಹಾಗೂ ಯೋಜನೇತರಡಿಯಲ್ಲಿ ಬರುವ ಅನುದಾನವನ್ನು ಮೂರನೇ ತ್ರೈಮಾಸಿಕ ಕಂತಾಗಿ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಆರ್ಥಿಕ ಅಧಿಕಾರದ ವ್ಯಾಪ್ತಿಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು, ದಿನಾಂಕ 27ನೇ ನವೆಂಬರ್ 2007**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2007-08ನೇ ಸಾಲಿಗೆ ಮೂರನೇ ತ್ರೈಮಾಸಿಕ ಕಂತಾಗಿ ಹುಡ್ಕೋ ಸಾಲಗಳ ಮೇಲುಸ್ತುವಾರಿ ರೂ. 742.79ನ್ನು ಬಿಟ್ಟು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಹಾಗೂ ಯೋಜನೇತರಡಿ ಮತ್ತು ಕೊಳಚೆ ಸುಧಾರಣೆ ಸಹಾಯಧನ ಒಟ್ಟು ರೂ. 180.00 ಲಕ್ಷ (ಒಂದು ಕೋಟಿ ಎಂಭತ್ತು ಲಕ್ಷ ಮಾತ್ರ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ರೂ. ಲಕ್ಷಗಳಲ್ಲಿ

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | 2007-08ನೇ ಸಾಲಿನ ಮೂರನೇ ತ್ರೈಮಾಸಿಕ | |
|---|---|---|---|
| | | ಯೋಜನೆ | ಯೋಜನೇತರ |
| 1. | ಸಿಬ್ಬಂದಿ ವೆಚ್ಚ 2217-04-191-2-01 (ಯೋಜನೆ) | 50.00 | 62.50 |
| 2. | ಕೊಳಚೆ ಸುಧಾರಣೆ ಸಹಾಯಧನ 2217-04-191-2-02 | 67.50 | |
| | **ಒಟ್ಟು** | **117.50** | **62.50** |

ಈ ಹಣಕಾಸಿನ ಬಗ್ಗೆ ಈ ಕೆಳಕಂಡ ನಿಬಂಧನೆಗಳನ್ನು ವಿಧಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತದೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಆರ್ಥಿಕ ಇಲಾಖೆಯ ಆದೇಶ ಸಂ. FD 21 TFP 2006, ದಿನಾಂಕ: 02.09.2006ರಲ್ಲಿ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2093

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4,

ವಸತಿ ಇಲಾಖೆ

**ಉನ್ನತ ಶಿಕ್ಷಣ ಸಚಿವಾಲಯ**

**ವಿಷಯ:** 2007-08ನೇ ಶೈಕ್ಷಣಿಕ ಸಾಲಿಗೆ ಬಿಜಾಪುರದ ಅನುಷ್ಠಾನ ಸೇವಾ ಸಮಿತಿಯ ನರೇಂದ್ರ ದೈಹಿಕ ಶಿಕ್ಷಣ ಮಹಾವಿದ್ಯಾಲಯಕ್ಕೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ.

**ಓದಲಾಗಿದೆ:** 1 ಕರ್ನಾಟಕ ಸರ್ಕಾರದ ನಡವಳಿ ಸಂಖ್ಯೆ: ಇಡಿ 184 ಯುಆರ್‌ಸಿ 2003, ದಿ: 21-2-2004.

2 ಎನ್.ಸಿ.ಟಿ.ಇ ಪತ್ರ ಸಂಖ್ಯೆ: S.SRO/NCTE/B.P.Ed./2006-07/11034, ದಿನಾಂಕ: 3-9-2007.

**ಪೀಠಿಕೆ:**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕದ ಬಿ.ಪಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬಿಜಾಪುರ ಅನುಷ್ಠಾನ ಸೇವಾ ಸಮಿತಿಯ ನರೇಂದ್ರ ದೈಹಿಕ ಶಿಕ್ಷಣ ಮಹಾವಿದ್ಯಾಲಯಕ್ಕೆ ಬಿ.ಪಿ.ಇಡಿ. ಕೋರ್ಸನ್ನು 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ: 3-9-2007ರ ಆದೇಶದಲ್ಲಿ ಎನ್.ಸಿ.ಟಿ.ಇ. ಸದರಿ ಕಾಲೇಜಿನ ಬಿ.ಪಿ.ಇಡಿ. ಕೋರ್ಸಿಗೆ 2007-08ನೇ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ: 11-9-2007ರ ಪತ್ರದಲ್ಲಿ ಸದರಿ ಸಂಸ್ಥೆಯ

ಅಧ್ಯಕ್ಷರು/ಕಾರ್ಯದರ್ಶಿಗಳು ತಮ್ಮ ಕಾಲೇಜಿನಲ್ಲಿ ಬಿ.ಪಿ.ಇಡಿ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 187 ಯುಕೆವಿ 2007, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ./ಬಿ.ಪಿ.ಇಡಿ ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬಿಜಾಪುರದ ಅನುಷ್ಠಾನ ಸೇವಾ ಸಮಿತಿಯ ನರೇಂದ್ರ ದೈಹಿಕ ಶಿಕ್ಷಣ ಮಹಾವಿದ್ಯಾಲಯದ ಬಿ.ಪಿ.ಇಡಿ ಕೋರ್ಸಿಗೆ 207-08ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1997

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಎ.ವಿ. ಸುನಾಳ್, ಹಿಂದಿನ ತಹಶೀಲ್ದಾರ್, ಹಳಿಯಾಳ ತಾಲ್ಲೂಕು, ಪ್ರಸ್ತುತ ನಿವೃತ್ತರು ಇವರಿಗೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1 ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಪತ್ರ ಸಂ: ಕಂಶಾ: ಸಿಬ್ಬಂದಿ (1) ವಿವ: 258: 03-04, ದಿನಾಂಕ: 3-2-2005.
2 ಮಹಾಲೇಖಪಾಲರು (ಎ ಮತ್ತು ಇ), ಕರ್ನಾಟಕ, ಬೆಂಗಳೂರು ಇವರ ಪತ್ರ ಸಂ: GEI/RI/ 2002-03/844 Dt: 15-11-2002

**ಪ್ರಸ್ತಾವನೆ:**

ಶ್ರೀ ಏ.ವಿ. ಸುನಾಳ್, ಹಿಂದಿನ ತಹಶೀಲ್ದಾರ್, ಹಳಿಯಾಳ ತಾಲ್ಲೂಕು ಇವರಿಗೆ ದಿನಾಂಕ: 1-11-2003, 1-11-2004, 1-11-2005 ರಿಂದ ಮೊದಲನೇ, ಎರಡನೇ ಹಾಗೂ ಮೂರನೇ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ ಕ್ರ.ಸಂ. (1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 15-11-2002 ರ ಪತ್ರದಲ್ಲಿ ಮಹಾಲೇಖಪಾಲರು ಶ್ರೀ ಏ.ವಿ. ಸುನಾಳ್, ಹಿಂದಿನ ತಹಶೀಲ್ದಾರ್, ಹಳಿಯಾಳ ತಾಲ್ಲೂಕು ಇವರು ವೇತನ ಶ್ರೇಣಿ ರೂ. 6000-11,200 ರಲ್ಲಿ ದಿನಾಂಕ 1-11-2002 ರಂದು ಗರಿಷ್ಟ ಮಿತಿ ತಲುಪಿರುವುದಾಗಿ ವರದಿ ಮಾಡಿರುತ್ತಾರೆ. ಶ್ರೀಯುತರು ದಿನಾಂಕ: 30-6-2006ರಂದು ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ದಿನಾಂಕ: 1-11-2003 ರಿಂದ ದಿನಾಂಕ: 1-11-2004 ರಿಂದ ದಿನಾಂಕ: 1-11-2005 ರಿಂದ ಅನುಕ್ರಮವಾಗಿ ಮೊದಲನೇ, ಎರಡನೇ ಹಾಗೂ ಮೂರನೇ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಬೇಕಾಗಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 82 ಎಎಸ್‌ಡಿ 2004, ದಿನಾಂಕ: 31ನೇ ಅಕ್ಟೋಬರ್ 2007**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಏ.ವಿ. ಸುನಾಳ್, ನಿವೃತ್ತ ತಹಶೀಲ್ದಾರ್ ಇವರಿಗೆ ವೇತನ ಶ್ರೇಣಿ ರೂ. 6000-11,2000 ರಲ್ಲಿ ಈ ಕೆಳಕಂಡಂತೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಿದೆ.

1. ದಿನಾಂಕ: 1-11-2003 ರಿಂದ ರೂ. 11,200+320 - ಪ್ರಥಮ ಸ್ಥಗಿತ ವೇತನ ಬಡ್ತಿ.
2. ದಿನಾಂಕ: 1-11-2004 ರಿಂದ ರೂ. 11,200+320+320 - ದ್ವಿತೀಯ ಸ್ಥಗಿತ ವೇತನ ಬಡ್ತಿ
3. ದಿನಾಂಕ: 1-11-2005 ರಿಂದ ರೂ. 11,200+320+320 - ತೃತೀಯ ಸ್ಥಗಿತ ವೇತನ ಬಡ್ತಿ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1994

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ಸಂಖ್ಯೆ: ಕಂಇ 22 ಮುಅಕಾ 2001, ಬೆಂಗಳೂರ ದಿನಾಂಕ: 03-11-2007**

**ತಿದ್ದುಪಡಿ ಆದೇಶ**

ಶ್ರೀ ಮಲ್ಲೈ ಮಹದೇಶ್ವರ ಬೆಟ್ಟಕ್ಕೆ ಕಾವೇರಿ ನದಿಯಿಂದ ಶಾಶ್ವತ ಕುಡಿಯುವ ನೀರು ಸರಬರಜು ಯೋಜನೆ ಕೈಗೊಳ್ಳಲು ಪರಿಷ್ಕೃತ ಅಂದಾಜಿಗೆ ಅನುಮೋದನೆ ನೀಡುವ ಸಂಬಂಧ ಹೊರಡಿಸಲಾದ ಸರ್ಕಾರಿ ಆದೇಶ ಸಂಖ್ಯೆ: ಕಂಇ 22 ಮುಅಬಿ 2001 ದಿನಾಂಕ: 08-06-2007ರ ತಿದ್ದುಪಡಿ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ.

ಮುಂದುವರೆಸುತ್ತಾ, ಸರ್ಕಾರಿ ಆದೇಶ ಸಂಖ್ಯೆ: ಕಂಇ 22 ಮುಅಕಾ 2001 ದಿನಾಂಕ: 02–06–2007ರ ಆದೇಶದಲ್ಲಿ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು:–

ಪ್ರಸ್ತಾವನೆಯಲ್ಲಿ ಮೊದಲನೇ ಕಂಡಿಕೆ 3ನೇ ಸಾಲಿನಲ್ಲಿ "ಕುಡಿಯುವ ನೀರಿನ ಯೋಜನೆ ಕೈಗೊಳ್ಳಲು ರೂ. 11.50 ಲಕ್ಷಗಳ" ಎಂದಿರುವುದನ್ನು "ಕುಡಿಯುವ ನೀರಿನ ಯೋಜನೆ ಕೈಗೊಳ್ಳಲು ರೂ. 11.50 ಕೋಟಿಗಳ" ಎಂದು ಮತ್ತು ಆದೇಶ ಭಾಗದ ಮೊದಲನೇ ಕಂಡಿಕೆ 2ನೇ ಸಾಲಿನಲ್ಲಿ "ಶಾಶ್ವತ ಕುಡಿಯುವ ನೀರಿನ ಯೋಜನೆಯನ್ನು ರೂ. 11.50 ಲಕ್ಷಗಳಲ್ಲಿ" ಎಂದಿರುವುದನ್ನು "ಶಾಶ್ವತ ಕುಡಿಯುವ ನೀರಿನ ಯೋಜನೆಯನ್ನು ರೂ. 11.50 ಕೋಟಿಗಳಲ್ಲಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ನಂತರ ಆದೇಶ ಭಾಗದ ಎರಡನೇ ಕಂಡಿಕೆಯಲ್ಲಿ "ಸದರಿ ಮೊತ್ತವನ್ನು ಲೆಕ್ಕ ಶೀರ್ಷಿಕೆ 2250–00–800–1–03–ದೇವಸ್ಥಾನಗಳು ಮತ್ತು ಇತರೇ ಧಾರ್ಮಿಕ ಸಂಸ್ಥೆಗಳ ನಿರ್ವಹಣೆ (ಯೋಜನೇತರ)ರಡಿ ಭರಿಸಲಾಗುವುದು" ಎಂದಿರುವುದನ್ನು "2007–08ನೇ ಸಾಲಿನಲ್ಲಿ ಪೂರಕ ಅಂದಾಜುಗಳ (ಮೊದಲನೇ ಕಂತು) ಅಭಿಯಾಚನೆ ಸಂಖ್ಯೆ (14)ರಲ್ಲಿ ಲೆಕ್ಕ ಶೀರ್ಷಿಕೆ 2250–00–800–1–03–ದೇವಸ್ಥಾನಗಳು ಮತ್ತು ಇತರೇ ಧಾರ್ಮಿಕ ಸಂಸ್ಥೆಗಳು–200–ನಿರ್ವಹಣೆ ಅಡಿಯಲ್ಲಿ ರೂ 1727.00 ಲಕ್ಷ ಒದಗಿಸಿದ್ದು, ಈ ಮೊತ್ತದಲ್ಲಿ ಭರಿಸುವುದು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1993

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ,

ಕಂದಾಯ ಇಲಾಖೆ (ಮುಜರಾಯಿ)

**ಜಲಸಾರಿಗೆ ಸಚಿವಾಲಯ**

**ವಿಷಯ:** ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ನೇಮಕಾತಿ – ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಪದೋನ್ನತಿ ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ದಿನಾಂಕ 9.10.85ರ ಅಧಿಕೃತ ಜ್ಞಾಪನಾ ಸಂಖ್ಯೆ: ಡಿಪಿಎಆರ್ 5 ಎಸ್‌ಆರ್‌ಸಿ 84

**ಪ್ರಸ್ತಾವನೆ:**

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಗ್ರೂಪ್–ಎ ಮತ್ತು ಗ್ರೂಪ್–ಬಿ ವೃಂದದ ಹುದ್ದೆಗಳ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಮುಂಬಡ್ತಿ ನೀಡಲು ಪದೋನ್ನತಿ ನೀಡಲು ಅರ್ಹ ಅಧಿಕಾರಿಗಳನ್ನು ಪರಿಗಣಿಸಬೇಕಾದ ಪ್ರಮೇಯವಿದೆ. ಈ ಹಿನ್ನೆಲೆಯಲ್ಲಿ, ದಿನಾಂಕ 9.10.85ರ ಅಧಿಕೃತ ಜ್ಞಾಪನಾ ಸಂಖ್ಯೆ: ಎಪಿಎಆರ್ 5 ಎಸ್‌ಆರ್‌ಸಿ 84 ರನ್ವಯ ಇಲಾಖಾ ಪದೋನ್ನತಿ ಸಮಿತಿ ರಚಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 38 ಬನೌಸೇ 2007, ಬೆಂಗಳೂರು ದಿ: 6ನೇ ನವೆಂಬರ್ 2007**

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಅರ್ಹ ಅಧಿಕಾರಿಗಳಿಗೆ ಮುಂಬಡ್ತಿ ನೀಡಲು ಮೇಲೆ ಓದಲಾದ ದಿನಾಂಕ: 9.10.85ರ ಅಧಿಕೃತ ಜ್ಞಾಪನದನ್ವಯ ಈ ಕೆಳಕಂಡಂತೆ ಇಲಾಖಾ ಪದೋನ್ನತಿ ಸಮಿತಿಗಳನ್ನು ರಚಿಸಲಾಗಿದೆ.

**(1) ಗ್ರೂಪ್–ಎ ಹಿರಿಯ ವೇತನಶ್ರೇಣಿ ಮತ್ತು ಮೇಲ್ಪಟ್ಟು ಹುದ್ದೆಗಳಿಗೆ ಪದೋನ್ನತಿಯನ್ನು ನೀಡಲು:**

1. ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ — ಅಧ್ಯಕ್ಷರು
2. ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ನಿರ್ದೇಶಕರು — ಸದಸ್ಯರು
3. ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ ಅವರಿಗೆ ನಾಮ ನಿರ್ದೇಶನ ಮಾಡಲ್ಪಟ್ಟ ಉಪ ಕಾರ್ಯದರ್ಶಿ ಹುದ್ದೆಗೆ ಕಡಿಮೆಯಿಲ್ಲದ ಅಧಿಕಾರಿ — ಸದಸ್ಯರು

**(2) ಗ್ರೂಪ್–ಎ ವೃಂದಕ್ಕೆ ಗ್ರೂಪ್–ಬಿ ಮತ್ತು ಗ್ರೂಪ್–ಸಿ ವೃಂದದಿಂದ ಪದೋನ್ನತಿ ನೀಡಲು ಮತ್ತು ಗ್ರೂಪ್–ಬಿ ವೃಂದಕ್ಕೆ ಗ್ರೂಪ್–ಸಿ ವೃಂದದಿಂದ ಪದೋನ್ನತಿ ನೀಡಲು:**

1. ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ — ಅಧ್ಯಕ್ಷರು
2. ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ನಿರ್ದೇಶಕರು — ಸದಸ್ಯರು
3. ಅಪರ ಕಾರ್ಯದರ್ಶಿ : ಜಂಟಿ ಕಾರ್ಯದರ್ಶಿ : ಉಪ ಕಾರ್ಯದರ್ಶಿ (ಸೇವೆಗಳು) ಲೋಕೋಪಯೋಗಿ ಇಲಾಖೆ — ಸದಸ್ಯರು

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1992

**ಲಕ್ಷ್ಮೀನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಲೋಕೋಪಯೋಗಿ, ಬಂದರು ಮತ್ತು ಒಳನಾಡು

ಜಲಸಾರಿಗೆ ಇಲಾಖೆ (ಸೇವೆಗಳು–ಸಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸುವ ಬಗ್ಗೆ – ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರಿ ಆದೇಶ ಸಂಖ್ಯೆ: ಆಕುಕ 172 ಐಎಂಎಂ 2005, ದಿನಾಂಕ: 23–07–2007.
2 ಸರ್ಕಾರಿ ಆದೇಶ ಸಂಖ್ಯೆ: ಆಕುಕ 172 ಐಎಂಎಂ 2005, ದಿನಾಂಕ: 04–10–2007.
3 ಔಷಧ ನಿಯಂತ್ರಕರ ಪತ್ರ ಸಂಖ್ಯೆ: ಔನಿಇ/385/ಸಿಬ್ಬಂದಿ/2005–06 ದಿ: 17–11–2007
4 ಸರ್ಕಾರದ ಅ.ಟಿ. ಸಂಖ್ಯೆ: ಆಕುಕ 172 ಪಿಐಎಂ 2005 ದಿ: 21–11–2007
5 ಸರ್ಕಾರದ ಅ.ಟಿ. ಸಂಖ್ಯೆ: ಸಂವ್ಯಶಾಇ/139/ಆಡಳಿತ 2007 ದಿ: 26/11/2007.

**ಪ್ರಸ್ತಾವನೆ:**

ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ವೃತ್ತ–1 ಇವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ಅಬುಲ್ ಮೊಹಸಿನ್, ಉಪ ಔಷಧ ನಿಯಂತ್ರಕರು, ರಕ್ತನಿಧಿ (ಗುಪ್ತ ವಾರ್ತೆ) ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ನಂತರ ಶ್ರೀ ಅಬುಲ್ ಮೊಹಸಿನ್ ಇವರು ಕೇಂದ್ರಸ್ಥಾನದಿಂದ ವರ್ಗಾವಣೆಯಾದುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಶ್ರೀಮತಿ ಸುಧಾಸ್ವಾಮಿ, ಅಧೀಕ್ಷಕರು (ತಾಂತ್ರಿಕ), ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಔಷಧ ನಿಯಂತ್ರಕರು, ಶ್ರೀಮತಿ ಸುಧಾಸ್ವಾಮಿಯವರು ಮಂಡನಾಧಿಕಾರಿಯ ಕಾರ್ಯನಿರ್ವಹಿಸಲು ತಮ್ಮ ಅಸಮರ್ಥ್ಯವನ್ನು ಲಿಖಿತವಾಗಿ ವ್ಯಕ್ತಪಡಿಸಿರುವುದರಿಂದ ಸರ್ಕಾರದ ಹಂತದಲ್ಲಿಯೇ ಬೇರೊಬ್ಬ ಮಂಡನಾಧಿಕಾರಿಯನ್ನು ನೇಮಕ ಮಾಡುವಂತೆ ಔಷಧ ನಿಯಂತ್ರಕರು ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಉಲ್ಲೇಖಿತ (4)ರ ಅನಧಿಕೃತ ಟಿಪ್ಪಣಿಯಲ್ಲಿ ಸಂಸದೀಯ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಉಲ್ಲೇಖಿತ (4)ರ ಅನಧಿಕೃತ ಟಿಪ್ಪಣಿಯಲ್ಲಿ ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆಯನ್ನು ಆ ಇಲಾಖೆಯ ಸೂಕ್ತ ಅಧಿಕಾರಿಯೊಬ್ಬರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲು ಸೂಚಿಸುವಂತೆ ಕೋರಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಅನಧಿಕೃತ ಟಿಪ್ಪಣಿಯಲ್ಲಿ ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆಯು ಶ್ರೀ ಜಿ. ಶ್ರೀಧರ್, ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ಶಿಫಾರಸ್ಸು ಮಾಡಿದೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 172 ಐಎಂಎಂ 2005, ಬೆಂಗಳೂರು ದಿನಾಂಕ: 28ನೇ ನವೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ ಶ್ರೀ ಹೆಚ್. ಶ್ರೀನಿವಾಸ, ಸಹಾಯಕ ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ವೃತ್ತ–1 ಇವರ ವಿರುದ್ಧ ಹೂಡಲಾದ ಇಲಾಖಾ ವಿಚಾರಣೆಯ ಮುಂದೆ ಪ್ರಕರಣವನ್ನು ಮಂಡಿಸಲು ಶ್ರೀ ಜಿ. ಶ್ರೀಧರ್, ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಕ ಮಾಡಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2091

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂ) ಅವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1 ನೋಟೀಸ್ ಸಂ.ಕಂ.ಇ 26 ಭೂದಾಸೇ (1) 2001 ದಿ: 22–9–2001.
2 ಶ್ರೀ ವಿ. ಪ್ರಸನ್ನಕುಮಾರ್, ಭೂ.ಉ.ನಿ. ಅವರ ದಿ: 31–12–2001 ರ ಲಿಖಿತ ಹೇಳಿಕೆ.
3 ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂ) ರವರ ದಿ: 5–11–2001 ರ ಲಿಖಿತ ಹೇಳಿಕೆ.
4 ಸರ್ಕಾರಿ ಆದೇಶ ಸಂ.ಕಂ.ಇ 26 ಭೂದಾಸೇ (1) 2001, ದಿ: 21–9–2007.

5 ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ ದಕ್ಷಿಣ ವಲಯ, ಮೈಸೂರು ರವರ ಪತ್ರ ಸಂ.ಭೂದಾಖಲೆಗಳ ಜಂಟಿ ನಿರ್ದೇಶಕರು, ವಿಚಾರಣೆ 1/2007–08 ದಿ: 25–9–2007

**ಪ್ರಸ್ತಾವನೆ:**

ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂತ್ರಿಕ)ರವರು ಈ ಹಿಂದೆ ದಿನಾಂಕ: 8–6–95 ರಿಂದ 11–7–2000 ರವರೆಗೆ ಕ್ರಮವಾಗಿ ಭೂದಾಖಲೆಗಳ ಉಪ ನಿರ್ದೇಶಕರು, ಮಂಗಳೂರು ವಿಭಾಗ, ಮಂಗಳೂರು ಹಾಗೂ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಮಡಿಕೇರಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮಡಿಕೇರಿ ತಾಲ್ಲೂಕು, ಬಾಗಮಂಡಲ ಹೋಬಳಿ, ಬೆಟ್ಟತ್ತೂರು ಗ್ರಾಮದ ಸ.ನಂ. 1/24ಎ ಮತ್ತು 1/21ಬಿ ಇವುಗಳ ಗ್ರಾಮ ನಕಾಶೆಯಲ್ಲಿ ತಪ್ಪಾಗಿ ಪ್ಲಾಟ್ ಮಾಡಿ ಅದನ್ನಾಧರಿಸಿ ಮರ ಕಡಿತಲೆ ಮಾಡಲು ಜಂಟಿ ಅಳತೆ ನಕ್ಷೆಗೆ ಸಹಿ ಮಾಡಿ ಅರ್ಜಿದಾರರಿಗೆ ಅನುಕೂಲ ಮಾಡಿಕೊಡುವ ಉದ್ದೇಶ ಹೊಂದಿ ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ–3(i) ಮತ್ತು (iii) ನ್ನು ಉಲ್ಲಂಘಿಸಿದ ಆರೋಪಗಳಿಗಾಗಿ ಶ್ರೀ ವಿ. ಪ್ರಸನ್ನಕುಮಾರ್, ಭೂದಾಖಲೆಗಳ ಉಪ ನಿರ್ದೇಶಕರು, ಭೂಮಾಪನ ಇಲಾಖೆ ಹಾಗೂ ಶ್ರೀ ಕೆ.ಜಿ. ದುಂಡಪ್ಪ, ಅಧೀಕ್ಷಕರು (ತಾಂ) ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ 22–9–2001 ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2) ಮತ್ತು (3)ರಲ್ಲಿ ಓದಲಾದ ದಿನಾಂಕ: 31–12–2001 ಹಾಗೂ 5–11–2001ರ ಲಿಖಿತ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಮೇಲೆ (4)ರಲ್ಲಿ ಓದಲಾದ ದಿ: 21–9–2007 ರಲ್ಲಿ ಶ್ರೀ ಎಸ್. ಇಂಧುದರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, #8, 15ನೇ ಕ್ರಾಸ್, 5ನೇ ಹಂತ, ಜೆ.ಪಿ. ನಗರ, ಬೆಂಗಳೂರು–78 ರವರನ್ನು ವಿಚಾರಣಾಧಿಕಾರಿಗಳಾಗಿಯೂ ಜಂಟಿ ನಿರ್ದೇಶಕರು, ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ, ಮೈಸೂರುರವರನ್ನು ಮಂಡನಾಧಿಕಾರಿಗಳಾಗಿ ನೇಮಕ ಮಾಡಲಾಗಿತ್ತು. ಈ ಬಗ್ಗೆ ಮೇಲೆ (5)ರಲ್ಲಿ ಓದಲಾದ ದಿ: 25–9–2007ರ ಪತ್ರದಲ್ಲಿ ಜಂಟಿ ನಿರ್ದೇಶಕರು, ಭೂದಾಖಲೆಗಳ ಇಲಾಖೆ ನಗರಮಾಪನ ಮೈಸೂರು ರವರ ಪ್ರಸ್ತುತ ತಮಗೆ ವಹಿಸಿರುವ ಮಂಡನಾಧಿಕಾರಿ ಹುದ್ದೆ ಬದಲಿಗೆ ಶ್ರೀ ಕೆ.ವಿ. ರುದ್ರೇಶ್ ಭೂದಾಖಲೆಗಳ ಉಪ ನಿರ್ದೇಶಕರು, ನಗರಮಾಪನ ಬೆಂಗಳೂರುರವರನ್ನು ನೇಮಕ ಮಾಡಲು ಕೋರಿದ್ದಾರೆ.

ಈ ಬಗ್ಗೆ ಪರಿಶೀಲಿಸಿ ಈ ಪ್ರಕರಣದ ಆರೋಪ ಪಟ್ಟಿ, ಅನುಬಂಧ–4ರ ಸಾಕ್ಷಿಗಳ ಪಟ್ಟಿಯಲ್ಲಿ ಜಂಟಿ ನಿರ್ದೇಶಕರು, ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ, ಮೈಸೂರು ರವರ ಹೆಸರು ಒಳಗೊಂಡಿರುವುದರಿಂದ, ಅವರನ್ನು ಮಂಡನಾಧಿಕಾರಿಗಳಾಗಿ ಮುಂದುವರೆಸುವುದು ಸೂಕ್ತವಲ್ಲವೆಂದು ನಿರ್ಧರಿಸಿ ಶ್ರೀ ಕೆ.ವಿ. ರುದ್ರೇಶ್, ಭೂದಾಖಲೆಗಳ ಉಪ ನಿರ್ದೇಕರು, ನಗರಮಾಪನ ರವರನ್ನು ಪ್ರಸ್ತುತ ಪ್ರಕರಣಕ್ಕೆ ಮಂಡನಾಧಿಕಾರಿಗಳಾಗಿ ನೇಮಕ ಮಾಡುವ ಬಗ್ಗೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 26 ಭೂದಾಸೇ (1) 2001 ಬೆಂಗಳೂರು, ದಿನಾಂಕ: 22ನೇ ನವೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಪ್ರಸ್ತುತ ಪ್ರಕರಣದಲ್ಲಿ ಮಂಡನಾಧಿಕಾರಿಗಳಾಗಿ ನೇಮಕ ಮಾಡಲಾಗಿದ್ದ ಜಂಟಿ ನಿರ್ದೇಶಕರು ನಗರ ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆ, ಮೈಸೂರು ರವರ ಬದಲಾಗಿ ಶ್ರೀ ಕೆ.ವಿ. ರುದ್ರೇಶ್, ಭೂದಾಖಲೆಗಳ ಉಪ ನಿರ್ದೇಶಕರು, ನಗರಮಾಪನ, ಅಯುಕ್ತರ ಕಛೇರಿ, ಬೆಂಗಳೂರು ರವರನ್ನು ಮಂಡನಾಧಿಕಾರಿಗಳಾಗಿ ನೇಮಕ ಮಾಡಲಾಗಿದೆ. ಉಳಿದ ನಿಬಂಧನೆಗಳು ದಿ: 21–9–2007ರ ಆದೇಶದಲ್ಲಿನಂತೆಯೆ ಮುಂದುವರೆಯುತ್ತವೆ.

ಜಂಟಿ ನಿರ್ದೇಶಕರು, ನಗರಭೂಮಾಪನ ಭೂದಾಖಲೆಗಳ ಇಲಾಖೆ, ಮೈಸೂರು ರವರು ಕೂಡಲೇ ವಿಚಾರಣಾ ದಾಖಲೆಗಳನ್ನು ಶ್ರೀ ಕೆ.ವಿ. ರುದ್ರೇಶ್, ಭೂದಾಖಲೆಗಳ ಉಪ ನಿರ್ದೇಶಕರು ರವರಿಗೆ ವಹಿಸಿಕೊಡುವುದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2092

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀಮತಿ ಎಸ್.ಕೆ. ಇಂದ್ರಾಣಿ ಸಾವಂತಿಗೆ, ದ್ವಿತೀಯ ದರ್ಜೆ ಸಹಾಯಕರು ಇವರ ಪರೀಕ್ಷಾರ್ಥ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1 ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ1(1)/ದ್ವಿದಸ/ಪಪೂಅ/52/2004–05, ದಿನಾಂಕ: 19–11–2004.

2 ಸರ್ಕಾರದ ಆದೇಶ ಸಂಖ್ಯೆ: ವಾಕೈ 178 ರೇಇವಿ 2005, ದಿನಾಂಕ: 20–11–2006.

3 ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ1(1)/ದ್ವಿದಸ/ಪಪೂಘೋ/52/2004–05, ದಿನಾಂಕ: 1–9–2007.

**ಪ್ರಸ್ತಾವನೆ:**

ಶ್ರೀಮತಿ ಎಸ್.ಕೆ. ಇಂದ್ರಾಣಿ ಸಾವಂತಿಗೆ, ದ್ವಿತೀಯ ದರ್ಜೆ ಸಹಾಯಕರು, ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಶಿರಾ ಇವರು ಅನುಕಂಪದ ಆಧಾರದ ಮೇಲೆ ನೇಮಕಗೊಂಡು ದಿನಾಂಕ: 12–12–2001 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರ ಪರೀಕ್ಷಾರ್ಥ ಅವಧಿಯನ್ನು ದಿನಾಂಕ: 11–12–2003 ರಂದು ಘೋಷಿಸಬೇಕಾಗಿತ್ತು. ಆದರೆ ಸದರಿ ನೌಕರರು ಇಲಾಖಾ ಪರೀಕ್ಷೆಯನ್ನು ನಿಗದಿತ ಅವಧಿಯಲ್ಲಿ ಪಾಸು ಮಾಡಿಕೊಂಡಿರುವುದಿಲ್ಲ. ನೇಮಕಾತಿ ಪ್ರಾಧಿಕಾರವಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಅಧಿಕೃತ ಜ್ಞಾಪನದಲ್ಲಿ ಸದರಿ ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1)(ii)ರನ್ವಯ ದಿನಾಂಕ: 12–12–2003 ರಂದು 11–12–2004 ರವರೆಗೆ ವಿಸ್ತರಿಸಿ ಆದೇಶಿಸಿರುತ್ತಾರೆ.

ಶ್ರೀಮತಿ ಎಸ್.ಕೆ. ಇಂದ್ರಾಣಿ ಸಾವಂತಿಗೆ ಇವರು ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡಿಲ್ಲದ ಕಾರಣ, ನೌಕರರ ಮನವಿಯ ಮೇರೆಗೆ ಇವರ ಪರಿವೀಕ್ಷಣಾ ಅವಧಿಯನ್ನು ದಿ: 12–12–2004 ರಿಂದ ದಿ: 11–12–2006ರವರೆಗೆ ಮೇಲೆ ಓದಲಾದ ಉಲ್ಲೇಖ (2)ರ ಆದೇಶದಲ್ಲಿ ವಿಸ್ತರಿಸಲಾಗಿರುತ್ತದೆ. ಈ ನೌಕರರು ನಿಗದಿತ ಇಲಾಖಾ ಪರೀಕ್ಷೆಯನ್ನು 2006ನೇ ಸಾಲಿನ 2ನೇ ಅಧಿವೇಶನದಲ್ಲಿ ಪಾಸು ಮಾಡಿದ್ದು, ಫಲಿತಾಂಶವು ದಿ: 15–3–2007ರ ರಾಜ್ಯಪತ್ರದಲ್ಲಿ ಪ್ರಕಟವಾಗಿರುವುದರಿಂದ ಈ ನೌಕರರ ಪರಿವೀಕ್ಷಣಾ ಅವಧಿಯನ್ನು ದಿ: 12–12–2006 ರಿಂದ 15–3–2006ರವರೆಗೆ ವಿಸ್ತರಿಸಿ ಘೋಷಿಸುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ನೌಕರರ ಪರಿವೀಕ್ಷಣಾ ಅವಧಿಯನ್ನು, ಅವರು ನಿಗದಿತ ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡಿರುವ ದಿನಾಂಕದವರೆಗೆ ವಿಸ್ತರಿಸಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 146 ರೇಇವಿ 2007, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀಮತಿ ಎಸ್.ಕೆ. ಇಂದ್ರಾಣಿ ಸಾವಂತಿಗೆ, ದ್ವಿತೀಯ ದರ್ಜೆ ಸಹಾಯಕರು, ರೇಷ್ಮೆ ಸಹಾಯಕ ನಿರ್ದೇಶಕರ ಕಛೇರಿ, ಶಿರಾ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1) (i) ರನ್ವಯ ದಿನಾಂಕ: 12–12–2006 ರಿಂದ ದಿನಾಂಕ: 15–3–2007ರ ವರೆಗೆ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1989

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಶ್ರೀ ಬಸವೇಶ್ವರ ಶುಗರ್ಸ್ (ಲಿ), ರವರು ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕಿನ ಬಾಳಿಗೇರಿ ಗ್ರಾಮದಲ್ಲಿ 15 ಮೆ.ವ್ಯಾಟ್ ಸಹ ವಿದ್ಯುತ್ ಘಟಕ ಮತ್ತು 50 ಕೆ.ಎಲ್.ಪಿ.ಡಿ. ಡಿಸ್ಟಿಲರಿ ಹಾಗೂ ಎಥನಾಲ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07 ದಿ: 11.09.07.

2 ಆಯುಕ್ತರು, ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/20/2006–07 ದಿನಾಂಕ: 04–08–2007

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಶ್ರೀ ಬಸವೇಶ್ವರ ಶುಗರ್ಸ್ (ಲಿ)., ರವರು ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕಿನ ಬಾಳಿಗೇರಿ ಗ್ರಾಮದಲ್ಲಿ 15 ಮೆ. ವ್ಯಾಟ್ ಸಹ ವಿದ್ಯುತ್ ಘಟಕ ಮತ್ತು 50 ಕೆ.ಎಲ್.ಪಿ.ಡಿ ಡಿಸ್ಟಿಲರಿ ಹಾಗೂ ಎಥನಾಲ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 253 ಎಸ್‌ಜಿಎಫ್ 2007 ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2007.**

ಶ್ರೀ ಬಸವೇಶ್ವರ ಶುಗರ್ಸ್ (ಲಿ), ರವರು ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕಿನ ಬಾಳಿಗೇರಿ ಗ್ರಾಮದಲ್ಲಿ 15 ಮೆ.ವ್ಯಾಟ್ ಸಹ ವಿದ್ಯುತ್ ಘಟಕ ಮತ್ತು 50 ಕೆ.ಎಲ್.ಪಿ.ಡಿ. ಡಿಸ್ಟಿಲರಿ ಹಾಗೂ ಎಥನಾಲ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ. ಕಾರ್ಖಾನೆಗೆ ಕಬ್ಬಿನ ಮೀಸಲು ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅಧಿಸೂಚನೆಯನ್ನು ಹೊರಡಿಸಲಾಗುವುದು.

ಮುಂದುವರೆದು ಸಹವಿದ್ಯುತ್ ಘಟಕ, ಡಿಸ್ಟಿಲರಿ ಮತ್ತು ಎಥನಾಲ್ ಘಟಕ ಸ್ಥಾಪನೆಗೆ ಅನುಮತಿಯನ್ನು ಸಂಬಂಧಪಟ್ಟ ಇಲಾಖೆಗಳಿಂದ ನಿಯಮಾನುಸಾರ ಪಡೆದುಕೊಳ್ಳುವುದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1990

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಕೋಲಾರ ನಿರಾಶ್ರಿತರ ಪರಿಹಾರ ಕೇಂದ್ರಕ್ಕೆ (ಬಿಕ್ಷುಕರ ಕೇಂದ್ರ) ಬಂಗಾರಪೇಟೆ ತಾಲ್ಲೂಕು ಬೀರಂಡಹಳ್ಳಿಯ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರದ 23.15 ಎಕರೆ ಜಮೀನನ್ನು ಸಮಾಜ ಕಲ್ಯಾಣ ಇಲಾಖೆಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:**

1 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ ಹಾಗೂ ಅಧ್ಯಕ್ಷರು, ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಕೇಂಪಸ/ಎಡಿಎಂ/ಸಿಆರ್/13/2002-03, ದಿನಾಂಕ: 24-08-2007.

2 ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸರೇಕೃಕ್ಷೇ/ಜಮೀನು/ಮಳೆ/03/2007-08, ದಿನಾಂಕ: 10.9.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆಯ (1)ರ ಅರೆ ಸರ್ಕಾರಿ ಪತ್ರದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ ಹಾಗೂ ಅಧ್ಯಕ್ಷರು, ಕೇಂದ್ರ ಪರಿಹಾರ ಸಮಿತಿ ಇವರು ಕೋಲಾರ ಜಿಲ್ಲಾ ಕೇಂದ್ರದಲ್ಲಿ ನಿರಾಶ್ರಿತ ಪರಿಹಾರ ಕೇಂದ್ರ (ಬಿಕ್ಷುಕರ ಪರಿಹಾರ ಕೇಂದ್ರ) ಬಾಡಿಗೆ ಕಟ್ಟಡದಲ್ಲಿ ನಡೆಯುತ್ತಿರುವುದಾಗಿ ತಿಳಿಸಿ, ಸದರಿ ಕೇಂದ್ರಕ್ಕೆ ಸ್ವಂತ ಕಟ್ಟಡ ಕಟ್ಟಲು ಜಮೀನು ಮಂಜೂರು ಮಾಡುವ ಕುರಿತಂತೆ ಕೈಗೊಂಡ ಕ್ರಮದ ಕುರಿತಂತೆ ವಿವರಿಸಿ, ಕೋಲಾರ ಜಿಲ್ಲೆ, ಬಂಗಾರಪೇಟೆ ತಾಲ್ಲೂಕು, ಬೀರಂಡಹಳ್ಳಿಯ ಸರ್ವೆ ನಂ. 66ರಲ್ಲಿರುವ ಸರ್ಕಾರಿ ರೇಷ್ಮೆ ಕ್ಷೇತ್ರದ ಸ್ಥಳವನ್ನು ಪರಿಶೀಲನೆ ಮಾಡಿದ್ದು, ಸದರಿ ರೇಷ್ಮೆ ಕ್ಷೇತ್ರದಲ್ಲಿ 23.15 ಎಕರೆ ಜಮೀನು ಹಾಗೂ ಕಟ್ಟಡಗಳಿದ್ದು, ಹಾಲಿ ಸದರಿ ಜಮೀನನ್ನು ರೇಷ್ಮೆ ಇಲಾಖೆಯು ರೇಷ್ಮೆ ಕೃಷಿಗೆ ಉಪಯೋಗಿಸುತ್ತಿಲ್ಲ ಹಾಗೂ ಅಲ್ಲಿರುವ ಕಟ್ಟಡಗಳನ್ನು ರಿಪೇರಿ ಮಾಡಿಸಿದಲ್ಲಿ ಸದರಿ ಕಟ್ಟಡಗಳನ್ನು ನಿರಶ್ರಿತರ ಕೇಂದ್ರ ನಡೆಸಲು ಉಪಯೋಗಿಸಬಹುದು ಎಂಬುದಾಗಿ ಕಾರ್ಯದರ್ಶಿ, ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು ಇವರು ಅಭಿಪ್ರಾಯಪಟ್ಟಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೇ ದಿ: 9-5-2007ರಂದು ನಡೆದ ವಿಧಾನ ಮಂಡಲ ಭರವಸೆಗಳ ಸಭೆಯಲ್ಲಿ ಬೀರಂಡಹಳ್ಳಿ ರೇಷ್ಮೆ ಕೃಷಿ ಕ್ಷೇತ್ರದ ಕಟ್ಟಡವನ್ನು ನಿರಾಶ್ರಿತರ ಪರಿಹಾರ ಕೇಂದ್ರಕ್ಕೆ ಉಪಯೋಗಿಸಿಕೊಳ್ಳಲು ತಿಳಿಸಿರುತ್ತಾರೆ. ಆದ್ದರಿಂದ ಬಂಗಾರಪೇಟೆ ತಾಲ್ಲೂಕು, ಬೀರಂಡಹಳ್ಳಿ, ರೇಷ್ಮೆ ಕೃಷಿ ಕ್ಷೇತ್ರ ಸರ್ವೆ ನಂ. 66 ರಲ್ಲಿರುವ 27.15 ಎಕರೆ ಜಮೀನನ್ನು ನಿರಾಶ್ರಿತರ ಪರಿಹಾರ ಕೇಂದ್ರ, (ಬಿಕ್ಷುಕರ ಕೇಂದ್ರ) ನಡೆಸಲು ಜಮೀನಿನಲ್ಲಿರುವ ಕಟ್ಟಡ ಇತ್ಯಾದಿಗಳ ಸಮೇತ ಉಚಿತವಾಗಿ ಸಮಾಜಕಲ್ಯಾಣ ಇಲಾಖೆಗೆ ವರ್ಗಾಯಿಸಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ ಹಾಗೂ ಅಧ್ಯಕ್ಷರು, ಕೇಂದ್ರ ಪರಿಹಾರ ಸಮಿತಿ ಇವರ ಪತ್ರವನ್ನು ಉಲ್ಲೇಖಿಸಿ, ಸದರಿ ಪತ್ರದಲ್ಲಿ ಅವರು ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಬೀರಂಡಹಳ್ಳಿ, ಸರ್ವೆ ನಂ. 66 ರಲ್ಲಿರುವ 27.15 ಎಕರೆ ಜಮೀನನ್ನು ಸಮಾಜ ಕಲ್ಯಾಣ ಇಲಾಖೆಗೆ ವಹಿಸಿಕೊಡುವಂತೆ ಕೋರಿರುವುದಾಗಿ ತಿಳಿಸಿ, ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಬೀರಂಡಹಳ್ಳಿಯ ಜಮೀನಿನ ವಿವರ ಮತ್ತು ಕಟ್ಟಡಗಳ ವಿವರ ಒದಗಿಸಿ, ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ ಹಾಗೂ ಅಧ್ಯಕ್ಷರು, ಕೇಂದ್ರ ಪರಿಹಾರ ಸಮಿತಿ ಇವರು ಕೋರಿರುವಂತೆ ಬಂಗಾರಪೇಟೆ ತಾಲ್ಲೂಕು, ಬೀರಂಡಹಳ್ಳಿ ಸರ್ವೆ ನಂ. 66 ರಲ್ಲಿರುವ 27.15 ಎಕರೆ ಜಮೀನನ್ನು ಕಟ್ಟಡಗಳೊಂದಿಗೆ ಸಮಾಜ ಕಲ್ಯಾಣ ಇಲಾಖೆಗೆ ಉಚಿತವಾಗಿ ನೀಡಬಹುದಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿ, ಈ ಕುರಿತು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ ಹಾಗೂ ಅಧ್ಯಕ್ಷರು, ಕೇಂದ್ರ ಪರಿಹಾರ ಸಮಿತಿ ಇವರ ಕೋರಿಕೆ ಹಾಗೂ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ನೀಡಿರುವ ಅಭಿಪ್ರಾಯವನ್ನು ಪರಿಗಣಿಸಿ, ರೇಷ್ಮೆ ಕೃಷಿ ಅಭಿವೃದ್ಧಿ

ಶಿಫಾರಸ್ಸು ಮಾಡಿರುವಂತೆ ಸರ್ಕಾರಿ ರೇಷ್ಮೆ ಕೃಷಿ ಕೃಷಿ ಕ್ಷೇತ್ರ, ಬೀರಂಡಹಳ್ಳಿಯ ಜಮೀನನ್ನು ಸಮಾಜ ಕಲ್ಯಾಣ ಇಲಾಖೆಗೆ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 31 ರೇಯೋವಿ 2007, ಬೆಂಗಳೂರು, ದಿನಾಂಕ: 22ನೇ ನವೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರೇಷ್ಮೆ ಇಲಾಖೆಯು ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲ್ಲೂಕು ಬೀರಂಡಹಳ್ಳಿಯ ಸರ್ವೆ ನಂ. 66 ರಲ್ಲಿ ಹೊಂದಿರುವ, ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರದ 23.15 ಎಕರೆ ಜಮೀನನ್ನು ಅದರಲ್ಲಿರುವ 8 ಕಟ್ಟಡಗಳ ಸಹಿತ ನಿರಾಶ್ರಿತರ ಪರಿಹಾರ ಕೇಂದ್ರ (ಬಿಕ್ಷುಕರ ಪರಿಹಾರ ಕೇಂದ್ರ) ಕೋಲಾರ ಇದರ ಕಟ್ಟಡ ನಿರ್ಮಾಣ ಮಾಡುವುದಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ಉಚಿತವಾಗಿ ನೀಡುವುದಕ್ಕೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆರ್‌ಡಿ 148 ಎಲ್‌ಜಿಕೆ 2007, ದಿನಾಂಕ: 30–10–2007 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2090

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಮೆ. ಗೋಕಾಕ್ ಶುಗರ್ಸ್ (ಲಿ), ರವರು ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು, ಹಿರೇನಂದಿಯಲ್ಲಿ ಸ್ಥಾಪಿಸಲಿರುವ 14 ಮೆ.ವ್ಯಾಟ್ ಸಹವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04 ದಿ: 16.03.05.
2 ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07 ದಿ: 11.09.07.
3 ಸರ್ಕಾರದ ಆದೇಶ ಸಂಖ್ಯೆ: ಸಿಐ 108 ಎಸ್‌ಜಿಎಫ್ 06 ದಿ: 26.12.06.
4 ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಐ 108 ಎಸ್‌ಜಿಎಫ್ 06 ದಿನಾಂಕ: 26.12.06.
5. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/08/ 2006–07 ದಿನಾಂಕ: 09.06.2006.
6. ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/07 2006–07 ದಿನಾಂಕ: 18.05.2006.

**ಪ್ರಸ್ತಾವನೆ:**

ಮೇಲೆ ಓದಲಾದ (5)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಮೆ. ಗೋಕಾಕ್ ಶುಗರ್ಸ್ (ಲಿ), ರವರು ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು, ಹಿರೇನಂದಿಯಲ್ಲಿ 14 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1) ಮತ್ತು (2)ರಲ್ಲಿರುವ ಸರ್ಕಾರದ ಆದೇಶಗಳಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 60 ಎಸ್‌ಜಿಎಫ್ 07 ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2007**

ಮೆ. ಗೋಕಾಕ್ ಶುಗರ್ಸ್ (ಲಿ), ರವರು ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು, ಹಿರೇನಂದಿಯಲ್ಲಿ 14 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04, ದಿನಾಂಕ: 16.03.2005ರಲ್ಲಿ ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07 ದಿನಾಂಕ: 11.09.07ರಲ್ಲಿನ ನೀತಿಗಳನ್ವಯ ಪರಿಶೀಲಿಸಿ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

ಮೆ. ಗೋಕಾಕ್ ಶುಗರ್ಸ್ (ಲಿ)ರವರಿಗೆ ಹಿರೇನಂದಿಯಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ತಾತ್ವಿಕ ಅನುಮೋದನೆ ನೀಡಲಾದ ಕಾರಣ ಮೇಲೆ ಓದಲಾದ (3)ರಲ್ಲಿನ ಸರ್ಕಾರದ ಆದೇಶ ಸಂಖ್ಯೆ: ಸಿಐ 108 ಎಸ್‌ಜಿಎಫ್ 06 ದಿನಾಂಕ: 26.12.06ರಲ್ಲಿ ಶ್ರೀ ಲಕ್ಷ್ಮಣ್‌ರಾವ್ ಜಾರಕಿಹೊಳಿ ಶುಗರ್ಸ್ (ಲಿ), ರವರಿಗೆ ಬೆಳಗಾಂ ಜಿಲ್ಲೆ, ಗೋಕಾಕ್ ತಾಲ್ಲೂಕು ಹಿರೇನಂದಿ ಗ್ರಾಮದಲ್ಲಿ 14 ಮೆ. ವ್ಯಾಟ್ ಸಹವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ನೀಡಲಾಗಿದ್ದ ಸರ್ಕಾರದ ತಾತ್ವಿಕ ಅನುಮೋದನೆಯನ್ನು ಹಾಗೂ ಮೇಲೆ ಓದಲಾದ (4)ರಲ್ಲಿನ ಈ ಕಾರ್ಖಾನೆಗೆ ಕಬ್ಬಿನ ಮೀಸಲು ಕ್ಷೇತ್ರ ಹಂಚಿಕೆ ಸಂಬಂಧ ಹೊರಡಿಸಲಾಗಿದ್ದ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 108 ಎಸ್‌ಜಿಎಫ್ 2006 ದಿನಾಂಕ: 26.12.06ನ್ನು ಹಿಂದಕ್ಕೆ ಪಡೆಯಲಾಗಿದೆ.

ಮುಂದುವರೆದು ಸಹವಿದ್ಯುತ್ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1991 **ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಬಿ. ಸಂಪತ್ ಕುಮಾರ್, ಅಂದಿನ ದೊಡ್ಡಬಳ್ಳಾಪುರ ತಹಶೀಲ್ದಾರ್ (ಹಾಲಿ ದೇವನಹಳ್ಳಿ ತಹಶೀಲ್ದಾರ್) ಹಾಗೂ ಇತರರು – ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತು ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್ ಅಂಡ್ ಡಿ (ಪಿ) ಹರಾಜು–ಸಿಆರ್.–4–06–07 ದಿನಾಂಕ: 6–3–2007 ಹಾಗೂ ಎಲ್ ಅಂಡ್ ಡಿ (ಪಿ) ಸಿಆರ್ 37–07–08 ದಿನಾಂಕ: 17–7–2007.

**ಪ್ರಸ್ತಾವನೆ:**

ಮೇಲೆ ಓದಲಾದ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಪತ್ರಗಳಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಕಸಬ ಹೋಬಳಿ ಬಿಸವನಹಳ್ಳಿಯ ಗ್ರಾಮದ ಸರ್ವೆ ನಂ. 42ರಲ್ಲಿನ 2 ಎಕರೆ, 20 ಗುಂಟೆ ಒತ್ತುವರಿ ಜಮೀನನ್ನು ಸಾರ್ವಜನಿಕ ಹರಾಜಿಗೆ ಸಂಬಂಧಿಸಿದಂತೆ ಅಂದಿನ ದೊಡ್ಡಬಳ್ಳಾಪುರ ತಹಶೀಲ್ದಾರರಾದ ಶ್ರೀ ಬಿ. ಸಂಪತ್ ಕುಮಾರ್, (ಹಾಲಿ ತಹಶೀಲ್ದಾರ್ ದೇವನಹಳ್ಳಿ) ಇವರು ಕಂದಾಯ ದಾಖಲೆಗಳನ್ನು ಪರಿಶೀಲಿಸದೆ ಅಧೀನ ಸಿಬ್ಬಂದಿಯವರಾದ ಶ್ರೀ ನರಸಿಂಹಮೂರ್ತಿ ತಾಲ್ಲೂಕು ಸರ್ವೆಯರ್ ಹಾಗೂ ನಾಗರಾಜ್, ರಾಜಸ್ವ ನಿರೀಕ್ಷಕರು ಕಸಬಾ ಹೋ: ಇವರ ವರದಿಯನ್ನು ಆಧರಿಸಿ ಸದರಿ ಜಮೀನು ಸಾರ್ವಜನಿಕ ಹರಾಜಿಗೆ ಲಭ್ಯವಿದೆಯೆಂದು ಮೇಲಾಧಿಕಾರಿಗಳಿಗೆ ವರದಿ ನೀಡಿ, ದಿನಾಂಕ 19–12–2005ರಂದು ಸಾರ್ವಜನಿಕ ಹರಾಜಿಗೆ ಕಾರಣಾರಾಗಿರುತ್ತಾರೆಂದು ತಿಳಿಸಿರುವರು. ಸದರಿ ಜಮೀನನ್ನು ಹರಾಜಿನಲ್ಲಿ ಶ್ರೀ ಸಿ. ರಾಮಯ್ಯರೆಡ್ಡಿ ಎಂಬುವರು ಅತಿ ಹೆಚ್ಚಿನ ಮೊತ್ತಕ್ಕೆ ಬಿಡ್ ಮಾಡಿ ರೂ. 43.00 ಲಕ್ಷಗಳನ್ನು ಸರ್ಕಾರಕ್ಕೆ ಸಂದಾಯ ಮಾಡಿದ್ದು ನಂತರ ಭೌತಿಕವಾಗಿ ಜಮೀನು ತೋರಿಸಿ ಹಸ್ತಾಂತರಿಸಲು ಕಂದಾಯ ಇಲಾಖೆಯ ಅಧಿಕಾರಿಗಳು ವಿಫಲರಾಗಿರುವರು. ಹಾಗೂ ಸರ್ವೆ ನಂ–42ರಲ್ಲಿ ಹರಾಜಿಗೆ ಒತ್ತುವರಿ ಜಮೀನು ಲಭ್ಯವಿಲ್ಲವೆಂದು ತಿಳಿಸಿರುವರು. ಆದುದರಿಂದ, ಸದರಿ ಜಮೀನು ಸಾರ್ವಜನಿಕ ಹರಾಜಿಗೆ ಲಭ್ಯವಿದೆಯೆಂದು ತಪ್ಪು ಮಾಹಿತಿ ನೀಡಿ ಕರ್ತವ್ಯ ಚ್ಯುತಿ ಎಸಗಿರುವ ಶ್ರೀ ಬಿ. ಸಂಪತ್ ಕುಮಾರ್, ಹಿಂದಿನ ತಹಶೀಲ್ದಾರ್ ದೊಡ್ಡಬಳ್ಳಾಪುರ (ಹಾಲಿ ತಹಶೀಲ್ದಾರ್ ದೇವನಹಳ್ಳಿ) ಶ್ರೀ ನಾಗರಾಜ್ ರಾಜಸ್ವ ನಿರೀಕ್ಷಕರು, ಹಾಗೂ ಶ್ರೀ ನರಸಿಂಹಮೂರ್ತಿ ತಾಲ್ಲೂಕು ಸರ್ವೇಯರ್ ದೊಡ್ಡಬಳ್ಳಾಪುರ ತಾಲ್ಲೂಕು ಇವರನ್ನು ಇಲಾಖಾ ವಿಚಾರಣೆ ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತು ಮಾಡಲು ಜಿಲ್ಲಾಧಿಕಾರಿಗಳು ಕೋರಿರುವರು. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ತಹಶೀಲ್ದಾರ್ ಹಾಗೂ ನೌಕರರನ್ನು ಅಮಾನತ್ತು ಮಾಡುವುದು ಅವಶ್ಯಕವಿರುವುದೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: 34 ಎಡಿಇ 2007, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ 10 (1)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅಧಿಕಾರಿ ಹಾಗೂ ನೌಕರರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿದೆ.

1. ಶ್ರೀ ಬಿ. ಸಂಪತ್ ಕುಮಾರ್, ಹಿಂದಿನ ತಹಶೀಲ್ದಾರ್, ದೊಡ್ಡಬಳ್ಳಾಪುರ ತಾ: ಹಾಲಿ ತಹಶೀಲ್ದಾರ್ ದೇವನಹಳ್ಳಿ ತಾಲ್ಲೂಕು.
2. ಶ್ರೀ ನಾಗರಾಜ್, ರಾಜಸ್ವ ನಿರೀಕ್ಷಕರು, ಕಸಬಾ ಹೋಬಳಿ ದೇವನಹಳ್ಳಿ ತಾಲ್ಲೂಕು.
3. ಶ್ರೀ ನರಸಿಂಹಮೂರ್ತಿ, ತಾಲ್ಲೂಕು ಸರ್ವೇಯರ್, ದೊಡ್ಡಬಳ್ಳಾಪುರ ತಾಲ್ಲೂಕು.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿ ಹಾಗೂ ನೌಕರರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾದಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2087 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ:** ವಿದ್ಯಾ ವರ್ಧಕ ಸಂಘ, ಶೇಷಾದ್ರಿ ಐಯರ್ ರಸ್ತೆ, ಮೈಸೂರು ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಕುರಿತು.

**ಓದಲಾಗಿದೆ:**
1 ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ: ಸೊಸೈಟಿ:ಸಿಆರ್–936/53–54/2006–07 ದಿನಾಂಕ: 7–7–2007 ಮತ್ತು 16–7–2007
2 ಸರ್ಕಾರದ ಕಾರಣ ಕೇಳುವ ಸೂಚನೆ ಪತ್ರ ಸಂಖ್ಯೆ: ಕಂಇ 19 ಮುನೋಸೊ 2007 ದಿನಾಂಕ: 8–8–2007
3 ಕಾರ್ಯದರ್ಶಿಗಳು, ವಿದ್ಯಾವರ್ಧಕ ಸಂಘ, ಮೈಸೂರು ಇವರ ಲಿಖಿತ ಹೇಳಿಕೆ ದಿನಾಂಕ: 29–8–2007.

**ಪ್ರಸ್ತಾವನೆ:**

ಮೇಲೆ ಓದಲಾದ (1) ದಿನಾಂಕ: 7–7–2007 ಮತ್ತು 16–7–2007 ರ ಜಿಲ್ಲಾ ನೋಂದಣಾಧಿಕಾರಿಗಳ, ಮೈಸೂರು ರವರ ಪತ್ರಗಳಲ್ಲಿ ವಿದ್ಯಾವರ್ಧಕ ಸಂಘ, ಮೈಸೂರು ಈ ಸಂಘದ ಅರ್ಜಿದಾರರುಗಳು ನೀಡಿರುವ ಮನವಿಗಳನ್ನು ಪರಿಶೀಲಿಸಿದ್ದು, ಸಂಘದ ಸರ್ವ ಸದಸ್ಯರ ಬಗ್ಗೆ 2005 ರಿಂದಲೂ ಅವ್ಯವಹಾರ ಇದ್ದು ಸುಮಾರು 65 ಜನರು ಸಂಘದ ಸದಸ್ಯರು ಅರ್ಜಿ ಸಲ್ಲಿಸುತ್ತಾ ತಮ್ಮ ಸದಸ್ಯತ್ವವನ್ನು ಸಂಘದ ಅಧ್ಯಕ್ಷರು ಪರಿಗಣಿಸದೇ ಇರುವ ಕಾರಣಕ್ಕಾಗಿ ಮತ್ತು ಸಂಘದ ಹಣಕಾಸಿನ ಅವ್ಯವಹಾರಗಳನ್ನು ಹಾಗೂ ಜಮೀನು ಖರೀದಿಯಲ್ಲಿ ಅವ್ಯವಹಾರ ಎಸಗಿರುವ ಹಿನ್ನಲೆಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 18727/2006 ನ್ನು ಸಲ್ಲಿಸಿದ್ದು ಆರೋಪಗಳ ಬಗ್ಗೆ ವಿಚಾರಣೆ ನಡೆಸುವಂತೆ ಕೋರಿರುವುದಾಗಿ ಹಾಗೂ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25 ರನ್ವಯ ವಿಚಾರಣೆ ನಡೆಸುವುದು ಸೂಕ್ತವಾಗಿರುತ್ತದೆಂದು ಕೋರಿರುವ ಹಿನ್ನಲೆಯಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು ಈ ವಿಷಯವನ್ನು ಪರಿಗಣಿಸಿ ವಿದ್ಯಾವರ್ಧಕ ಸಂಘ, ಮೈಸೂರು ಈ ಸಂಸ್ಥೆಗೆ ವಿಚಾರಣೆ ನಡೆಸಲು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 25 (1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 25ರನ್ವಯ ಶ್ರೀ ಲಕ್ಷ್ಮೀನಾರಾಯಣ, ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ವಿಚಾರಣೆಯನ್ನು 30 ದಿನಗಳೊಳಗಾಗಿ ಪೂರೈಸಿ ವರದಿ ಸಲ್ಲಿಸುವಂತೆ ಆದೇಶವನ್ನು ಹೊರಡಿಸಿರುತ್ತಾರೆ.

ಸದರಿ ಆದೇಶದಂತೆ ವಿಚಾರಣಾಧಿಕಾರಿಗಳು ವಿಚಾರಣೆಯನ್ನು ದಿನಾಂಕ: 30–10–2006 ರಂದು ಪ್ರಾರಂಭಿಸಿದ್ದು, ಸಂಘದವರಿಗೆ ವಿಚಾರಣೆ ನೋಟೀಸನ್ನು ಜಾರಿಗೊಳಿಸಿ ಸುಮಾರು ದಿನಗಳು ವಿಚಾರಣೆ ನಡೆದಿದ್ದು ಸಂಘದವರಿಗೆ ಅವರ ಹೇಳಿಕೆಗಳನ್ನು ಪಡೆಯಲು ಅವಕಾಶ ನೀಡಿರುವುದು ವಿಚಾರಣಾ ವರದಿಯಲ್ಲಿ ಕಂಡುಬರುತ್ತದೆ. ಸದರಿ ವಿಚಾರಣೆಯಲ್ಲಿ ಅನೇಕ ಆರೋಪಗಳನ್ನು ಮಾಡಲಾಗಿರುತ್ತದೆ. ಇದರಲ್ಲಿ ಸದಸ್ಯರ ಪಟ್ಟಿಯ ವಿವರಗಳನ್ನು ಸಹ ಸಲ್ಲಿಸಿರುತ್ತಾರೆ. ಸಂಘದವರು 40 ಎಕರೆ ಜಮೀನನ್ನು ಖರೀದಿಸುವ ಬಗ್ಗೆ ಬ್ಯಾಂಕಿನ ವ್ಯವಹಾರದಲ್ಲೂ ಸಹ ಆರೋಪಗಳು ಇರುವುದಾಗಿ ತಿಳಿಸುತ್ತಾ ವಿಚಾರಣಾ ವರದಿಯ ಆಧಾರದ ಮೇಲೆ 131 ಜನರು ಸರ್ವ ಸದಸ್ಯರ ಪಟ್ಟಿಯೇ ಅಧಿಕೃತವಾದದ್ದು ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾ ಸದರಿ ಪಟ್ಟಿಯಲ್ಲಿ ದಾಖಲಿಸಿರುವ ಪ್ರಸ್ತುತ ಕಾಲಕ್ಕೆ ದೈವಾಧೀನರಾಗಿರುವ ಸದಸ್ಯರನ್ನು ಹೊರತು ಪಡಿಸಿ ಹಾಗೂ 131 ಮಂದಿ ಸದಸ್ಯತ್ವ ಅರ್ಜಿಗಳ ಪೈಕಿ ಅರ್ಜಿಗೆ ಸಹಿ ಹಾಕದೇ ಇರುವವರು ಸದಸ್ಯತ್ವ ಹೊಂದಲು ಅರ್ಹರಾಗದೇ ಇರುವುದರಿಂದ ಅವರನ್ನು ಸಹ ಹೊರತುಪಡಿಸಿ ಉಳಿದ ಸದಸ್ಯರಿಗೆ ಗುರುತಿನ ಚೀಟಿ ನೀಡಿ ಸದರಿ ಅರ್ಹ ಸದಸ್ಯರನ್ನೊಳಗೊಂಡಂತೆ ಸರ್ವ ಸದಸ್ಯರ ಸಭೆ ನಡೆಸಿ ಚುನಾಯಿತ ಕಾರ್ಯಕಾರಿ ಮಂಡಳಿ ಅವಧಿ ದಿನಾಂಕ: 31–3–2007ರ ಅಂತ್ಯಕ್ಕೆ ಮುಗಿದಿರುವುದರಿಂದ ಹೊಸ ಕಾರ್ಯಕಾರಿ ಮಂಡಳಿ ರಚನೆಗಾಗಿ ಚುನಾವಣೆ ನಡೆಸಿ ಆಯ್ಕೆಯಾದ ಅಧಿಕೃತ ಮಂಡಳಿಗೆ ಸಂಘದ ಪ್ರಭಾರವನ್ನು ವಹಿಸಲು ಹಾಗೂ ಸದರಿ ಸಂಸ್ಥೆಯಲ್ಲಿ ಕಾರ್ಯಕಾರಿ ಮಂಡಳಿಯ ಮೇಲೆ ತಾಂತ್ರಿಕವಾದ ಇತರೆ ಆರೋಪಗಳು ಇರುವುದರಿಂದ ಸದರಿ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27ಎ ರನ್ವಯ ಆಡಳಿತಾಧಿಕಾರಿಯನ್ನು ನೇಮಕ ಮಾಡುವುದು ಸಮಂಜಸವೆಂದು ವಿಚಾರಣಾಧಿಕಾರಿಗಳು ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (2)ರ ಜಿಲ್ಲಾ ನೋಂದಣಾಧಿಕಾರಿಗಳ ವರದಿಯ ಆಧಾರದ ಮೇಲೆ ಸರ್ಕಾರವು ಸಂಸ್ಥೆಗೆ ಕಾರಣ ಕೇಳುವ ಸೂಚನಾ ಪತ್ರವನ್ನು ದಿನಾಂಕ: 8–8–2007 ರಲ್ಲಿ ವಿದ್ಯಾವರ್ಧಕ ಸಂಘ (ರಿ), ಶೇಷಾದ್ರಿ ಐಯರ್ ರಸ್ತೆ, ಮೈಸೂರು ಈ ಸಂಸ್ಥೆಯಲ್ಲಿ ಸದಸ್ಯರ ಅರ್ಹತೆ ಬಗ್ಗೆ, 40 ಎಕರೆ ಜಮೀನು ಖರೀದಿಯ ಬಗ್ಗೆ ಹಾಗೂ ಇತರೆ ಅವ್ಯವಹಾರ ಬಗ್ಗೆ ಆರೋಪಗಳಿದ್ದು ಹಾಗೂ ಸಂಸ್ಥೆಯ ಚುನಾಯಿತ ಕಾರ್ಯಕಾರಿ ಮಂಡಳಿಯ ಅವಧಿಯು 2007ನೇ ಮಾರ್ಚ್ ಅಂತ್ಯಕ್ಕೆ ಮುಕ್ತಾಯಗೊಂಡಿದ್ದು ಹೊಸದಾಗಿ ಕಾರ್ಯಕಾರಿ ಮಂಡಳಿಯನ್ನು ರಚಿಸಿಕೊಳ್ಳುವ ಅಗತ್ಯವಿರುವ ಹಿನ್ನಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 (ಎ) ಪ್ರಕಾರ ಏಕೆ ಮುಂದಿನ ಕ್ರಮ ಕೈಗೊಳ್ಳಬಾರದು ಎಂಬ ಬಗ್ಗೆ ಸಂಸ್ಥೆಯ ಲಿಖಿತ ಮೌಖಿಕ ವಿವರಣೆ ಮತ್ತು ಹೇಳಿಕೆಯನ್ನು ಸಹ ದಾಖಲೆಗಳೊಂದಿಗೆ ಕಾರ್ಯದರ್ಶಿಯವರ ಸಮ್ಮುಖದಲ್ಲಿ ಈ ಸೂಚನಾ ಪತ್ರ ತಲುಪಿದ 15 ದಿವಸಗಳ ಒಳಗಾಗಿ ಸಲ್ಲಿಸುವುದು, ತಪ್ಪಿದಲ್ಲಿ, ನೀವು ಹೇಳುವುದು ಏನೂ ಇಲ್ಲವೆಂದು

ಭಾವಿಸಿ ನಿಯಮಾನುಸಾರ ಮುಂದಿನ ಕ್ರಮ ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ ಎಂದು ಕಾರಣ ಕೇಳುವ ಸೂಚನಾ ಪತ್ರವನ್ನು ಹೊರಡಿಸಲಾಗಿರುತ್ತದೆ.

ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ದಿನಾಂಕ: 8–8–2007 ಕ್ಕೆ ಕಾರ್ಯದರ್ಶಿಗಳು, ವಿದ್ಯಾವರ್ಧಕ ಸಂಘ, ಮೈಸೂರು ಇವರು ದಿನಾಂಕ: 29–8–2007 ರಂದು ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸದರಿ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿದೆ.

ಶ್ರೀ ಟಿ.ಎನ್. ವೆಂಕಟಾಚಲಯ್ಯ, ಸದಸ್ಯರು ಶ್ರೀ ಪಿ. ವಿಶ್ವನಾಥ್, ಕಾರ್ಯದರ್ಶಿಗಳು ಹಾಗೂ ಇತರರು ವಿದ್ಯಾವರ್ಧಕ ಸಂಘ, ಮೈಸೂರು ಇವರುಗಳು ಅನೇಕ ಮನವಿಗಳನ್ನು ಮಾನ್ಯ ರಾಜ್ಯಪಾಲರಿಗೆ ಹಾಗೂ ಸರ್ಕಾರಕ್ಕೆ ಸಲ್ಲಿಸಿ ಸದರಿ ಸಂಘದಲ್ಲಿ ಜಮೀನು ಖರೀದಿ ಹಾಗೂ ಹಣಕಾಸಿನ ಅವ್ಯವಹಾರ ಹಾಗೂ ಕಾರ್ಯಕಾರಿ ಮಂಡಳಿಯ ಅವಧಿಯು 2007ನೇ ಮಾರ್ಚ್ ಅಂತ್ಯಕ್ಕೆ ಮುಗಿದಿರುವುದರಿಂದ ಚುನಾವಣೆ ಇದುವರೆಗೂ ನಡೆಯದೇ ಇರುವುದರಿಂದ ಸದರಿ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 ರನ್ವಯ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಕೋರಿರುತ್ತಾರೆ.

ವಿದ್ಯಾವರ್ಧಕ ಸಂಘ, ಮೈಸೂರು ಈ ಸಂಘದ ಅಧ್ಯಕ್ಷರಾದ ಶ್ರೀ ಚಿಕ್ಕಬೋರಯ್ಯ, ಉಪಾಧ್ಯಕ್ಷರಾದ ಎಂ. ಮುನಿರಾಯಪ್ಪ ಮತ್ತು ಕಾರ್ಯದರ್ಶಿಯಾದ ಶ್ರೀ ರಮೇಶ್ ಹಾಗೂ ಅವರ ಪರವಾಗಿ ವಕೀಲರು ಇವರುಗಳು ದಿನಾಂಕ: 25–10–2007 ರಂದು ಕಾರ್ಯದರ್ಶಿಯವರ ಮುಂದೆ ಖುದ್ದಾಗಿ ಹಾಜರಾಗಿ ಶ್ರೀ ವಿಶ್ವನಾಥ್, ಶ್ರೀ ವೆಂಕಟಾಚಲಯ್ಯ ರವರುಗಳು ಸಂಘದ ವಿರುದ್ಧವಾಗಿ ನೀಡಿರುವ ದೂರು/ಮನವಿಗಳ ಪ್ರತಿಗಳನ್ನು ನೀಡಬೇಕೆಂದು ಕೋರಿದರು. ಸಂಘದವರ ಕೋರಿಕೆಯಂತೆ ದೂರು/ಮನವಿಗಳ ಪ್ರತಿಗಳನ್ನು ದಿನಾಂಕ: 26–10–2007ರಲ್ಲಿ ಸದರಿ ಪತ್ರಗಳನ್ನು ಪರಿಶೀಲಿಸಿ ತಮ್ಮ ಆಕ್ಷೇಪಣೆಗಳನ್ನು ಈ ಪತ್ರ ತಲುಪಿದ ಒಂದು ವಾರದೊಳಗಾಗಿ ಸರ್ಕಾರಕ್ಕೆ ಕಳುಹಿಸುವಂತೆ ತಿಳಿಸಲಾಗಿದೆ. ಸದರಿ ಪತ್ರಗಳನ್ನು ಸಂಘದ ಪರವಾಗಿ ವಕೀಲರು ದಿನಾಂಕ: 3–11–2007 ರಂದು ಖುದ್ದಾಗಿ ಬಂದು ಸಹಿ ಮಾಡಿ ಪಡೆದಿರುತ್ತಾರೆ. ತದನಂತರ ಅವರಿಂದ ಯಾವುದೇ ಹೇಳಿಕೆ/ಮನವಿಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

ಜಿಲ್ಲಾ ನೋಂದಣಾಧಿಕಾರಿಗಳ ವರದಿಗಳನ್ನು ಸಂಘದ ಲಿಖಿತ ಹೇಳಿಕೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಸಂಘವು ಸಂಘಗಳ ನೊಂದಣಿ ಕಾಯ್ದೆ ಕಲಂಗಳನ್ನು ಉಲ್ಲಂಘನೆ ಮಾಡಿರುವುದು ಕಂಡು ಬಂದಿದ್ದು ಸಂಘದ ಹಿತದೃಷ್ಟಿಯಿಂದ ಸಂಘಕ್ಕೆ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 19 ಮುನೋಸೊ 2007 ಬೆಂಗಳೂರು, ದಿನಾಂಕ: 22ನೇ ನವೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿದ್ಯಾವರ್ಧಕ ಸಂಘ, ಶೇಷಾದ್ರಿ ಐಯರ್ ರಸ್ತೆ, ಮೈಸೂರು ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಸಂಘದ ಹಿತದೃಷ್ಟಿಯಿಂದ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರನ್ನು ಆಡಳಿತಾಧಿಕಾರಿಯಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಜರೂರಾಗಿ ಸರ್ವಸದಸ್ಯರ ಸಭೆ ಕರೆದು, ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2084

**ಶಿವಲಿಂಗ**

ಪೀಠಾಧಿಕಾರಿ,

ಕಂದಾಯ ಇಲಾಖೆ

(ನೋಂದಣಿ ಮತ್ತು ಮುದ್ರಾಂಕ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶದ ವ್ಯಾಪ್ತಿಯಲ್ಲಿ (BMR) ಬಿಡದಿಯ ಹತ್ತಿರ ಹೊಸ ಸಮಗ್ರ ಉಪನಗರ ಅಭಿವೃದ್ಧಿ ಯೋಜನೆಗೆ ಹೆಚ್ಚುವರಿ ಜಮೀನು ಸೇರ್ಪಡೆ ಸೇರಿಸುವುದು ಹಾಗೂ ಈ ಯೋಜನೆಯಿಂದ ಬಾಧಿತರಾಗುವ ಸಂತ್ರಸ್ತರಿಗೆ ನೀಡುವ ಭೂಪರಿಹಾರ ಮತ್ತು ಪುನರ್ವಸತಿ ಪ್ಯಾಕೇಜ್‌ನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಯುಡಿಡಿ 97 ಬಿಎಂಆರ್ 2006 ದಿನಾಂಕ: 18.10.2006.
2 ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಮಹಾನಗರ ಅಯುಕ್ತರವರು ಪತ್ರದ ಸಂಖ್ಯೆ: ಬಿಎಂಆರ್‌ಡಿ/LAQ/ / 2006–07 ದಿನಾಂಕ: 13.02.2007.

**ಪ್ರಸ್ತಾವನೆ:**

ಮೇಲೆ 1ರಲ್ಲಿ ಓದಲಾದ ದಿನಾಂಕ 18.10.2006ರ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶದ ವ್ಯಾಪ್ತಿಯಲ್ಲಿ 1) ಬಿಡದಿ, ರಾಮನಗರ ತಲ್ಲೂಕು 2) ರಾಮನಗರ, ರಾಮನಗರ ತಾಲ್ಲೂಕು, 3) ಸಾತನೂರು, ಕನಕಪುರ ತಾಲ್ಲೂಕು, 4) ಸೋಲೂರು, ಮಾಗಡಿ ತಾಲ್ಲೂಕು ಮತ್ತು 5) ನಂದಗುಡಿ, ಹೊಸಕೋಟೆ ತಾಲ್ಲೂಕುಗಳಲ್ಲಿ 5 ಹೊಸ ಸಮಗ್ರ

ಉಪನಗರಗಳನ್ನು ಅಭಿವೃದ್ಧಿಪಡಿಸಲು ಸರ್ಕಾರ ಮಂಜೂರಾತಿ ನೀಡಿ ಈ ಪೈಕಿ ಪ್ರಾಯೋಗಿಕವಾಗಿ ಬಿಡದಿ ಉಪನಗರವನ್ನು ಅಭಿವೃದ್ಧಿಪಡಿಸಲು ಸರ್ಕಾರ ಆದೇಶಿಸಿತ್ತು.

ಮೇಲೆ 2ರಲ್ಲಿ ಓದಲಾದ ದಿನಾಂಕ 13.2.2007ರ ಪತ್ರದಲ್ಲಿ ಮಹಾನಗರ ಅಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರು ಬಿಡದಿ ಸಮಗ್ರ ಉಪನಗರವು ರಾಮನಗರ ತಾಲ್ಲೂಕಿನ ಬಿಡದಿ ಹೋಬಳಿಯಲ್ಲಿ ಬರುತ್ತಲಿದ್ದು, ಇದರ ವ್ಯಾಪ್ತಿಯಲ್ಲಿ 8 ಗ್ರಾಮಗಳನ್ನು ಒಳಗೊಂಡಂತೆ ದಿನಾಂಕ: 18.10.2006ರ ಸರ್ಕಾರಿ ಆದೇಶದಲ್ಲಿ ಈ ಹಿಂದೆ ಅನುಮೋದನೆ ನೀಡಲಾಗಿತ್ತೆಂದು, ನಂತರ ನಡೆದ ಸಮೀಕ್ಷೆಯಲ್ಲಿ ಬಿಡದಿ ಹೋಬಳಿ ಮಂಡಲಹಳ್ಳಿ ಗ್ರಾಮ ಹಾಗೂ ಕನಕಪುರ ತಾಲ್ಲೂಕಿನ ಹಾರೋಹಳ್ಳಿ ಹೋಬಳಿಯ ವಡೇರಹಳ್ಳಿ ಗ್ರಾಮಗಳ ಜಮೀನುಗಳ ವಿಸ್ತೀರ್ಣಗಳ ಕ್ರಮವಾಗಿ 92.21 ಎಕರೆ ಮತ್ತು 62.36 ಎಕರೆ ಇದ್ದು ಈ ಗ್ರಾಮಗಳು ಬಿಡದಿ ಉಪನಗರ ಯೋಜನೆಯ ವ್ಯಾಪ್ತಿಯಲ್ಲಿ ಬರುತ್ತಲಿರುವುದರಿಂದ ಈ ಜಮೀನುಗಳನ್ನು ಸಹ ಈ ಯೋಜನೆಯಡಿ ಸೇರಿಸಬೇಕಾದ ಅವಶ್ಯವಿದೆ ಎಂದು ಅಭಿಪ್ರಾಯಿಸಿರುತ್ತಾರೆ. ಅದರಂತೆ (1) ಬಿಡದಿ ಹೋಬಳಿ, ಮಂಡಲಹಳ್ಳಿ ಒಟ್ಟು ವಿಸ್ತೀರ್ಣ 92.21 ಎಕರೆ ಭೂಮಿಯನ್ನು ಹಾಗೂ ಕನಕಪುರ ತಾಲ್ಲೂಕು ಹಾರೋಹಳ್ಳಿ ಹೋಬಳಿಯ ವಡೇರಹಳ್ಳಿ ಗ್ರಾಮದ ಭಾಗಶಃ ವಿಸ್ತೀರ್ಣ 62.36 ಎಕರೆಯನ್ನು ಬಿಡದಿ ಉಪನಗರ ಯೋಜನೆಯ ವ್ಯಾಪ್ತಿಗೆ ಸೇರಿಸಲು (2) ಹಾಗೂ ಬಿಡದಿ ಸಮಗ್ರ ಉಪನಗರ ಯೋಜನೆಯಡಿ ಜಮೀನು ಕಳೆದುಕೊಳ್ಳುತ್ತಿರುವ ಸಂತ್ರಸ್ತರನ್ನು ಇದೇ ಯೋಜನೆಯಡಿ ಆರ್ಥಿಕವಾಗಿ ಏಕೀಕರಣ (Economic integration) ಮಾಡುವುದು ಯೋಜನೆಯ ಒಂದು ಮುಖ್ಯ ಪರಿಕಲ್ಪನೆಯಾಗಿದ್ದು, ಈ ಯೋಜನೆಯಡಿ ಜಮೀನು ಕಳೆದುಕೊಳ್ಳುತ್ತಿರುವ ಎಲ್ಲಾ ಸಂತ್ರಸ್ತರಿಗೆ ಈ ಯೋಜನಾ ವ್ಯಾಪ್ತಿಯಲ್ಲಿ ದೊರಕುವ ಆರ್ಥಿಕ ಫಲಗಳನ್ನು ಬಹುದೀರ್ಘಕಾಲಕ್ಕೆ ಸಿಗುವಂತೆ ಮಾಡುವುದು ಸಹ ಒಂದು ಪ್ರಮುಖ ಉದ್ದೇಶವಾಗಿದೆ (3) ಆ ರೈತ ಬಾಂಧವರು ಬಿಎಂಆರ್‌ಡಿಎ ಮಾರ್ಗಸೂಚಿ ಬೆಲೆಗಳಲ್ಲಿ ಸೂಚಿಸಿರುವಂತಹ A, B, C ಮತ್ತು D ವರ್ಗದ ಜಮೀನುಗಳಿಗೆ ಸೂಚಿಸಿದ ಬೆಲೆಗಳಲ್ಲಿ ಬಹಳ ಹೆಚ್ಚಿನ ಅಂತರವಿರುವುದು ಸರಿಯಲ್ಲವೆಂದು ಹಾಗೂ ಈ ಅಂತರವನ್ನು ಕಡಿತಗೊಳಿಸುವ ಬಗ್ಗೆ (ಆ ಬಗ್ಗೆ ರೈತ ಪ್ರತಿನಿಧಿಗಳೊಂದಿಗೆ ಬಿಎಂಆರ್‌ಡಿಎ ಚರ್ಚೆ ನಡೆಸಿದ ನಂತರ) ಒಂದು ಸಮಗ್ರ ಭೂಪರಿಹಾರ ಮತ್ತು ಪುನರ್ವಸತಿ ಪ್ಯಾಕೇಜ್‌ಗಳನ್ನು ರೂಪಿಸಿ ಸದರಿ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆ ನೀಡಲು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 30 ಬಿಎಂಆರ್ 2007 ಬೆಂಗಳೂರು, ದಿನಾಂಕ: 11ನೇ ಜೂನ್ 2007**

ಪ್ರಸ್ತಾವನೆಯಲ್ಲಿ ಹೇಳಿರುವ ಅಂಶಗಳನ್ನು ಪರಿಗಣಿಸಿ, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಪ್ರಸ್ತಾವನೆಗಳಿಗೆ ಈ ಕೆಳಕಂಡಂತೆ ಸರ್ಕಾರದ ಅನುಮೋದನೆಯನ್ನು ನೀಡಿದೆ.

(i) ಬಿಡದಿ ಸಮಗ್ರ ಉಪನಗರ ಯೋಜನೆಯ ವ್ಯಾಪ್ತಿಗೆ ಬಿಡದಿ ಹೋಬಳಿಯ ಪೂರ್ತ ಮಂಡಲಹಳ್ಳಿ ಗ್ರಾಮದ (ವಿಸ್ತೀರ್ಣ 92.21 ಎಕರೆ) ಮತ್ತು ಕನಕಪುರ ತಾಲ್ಲೂಕು, ಹಾರೋಹಳ್ಳಿ ಹೋಬಳಿಯ ಭಾಗಶಃ ವಡೇರಹಳ್ಳಿ ಗ್ರಾಮದ (ವಿಸ್ತೀರ್ಣ 62.36 ಎಕರೆ) ಪ್ರದೇಶವನ್ನು ಹೆಚ್ಚುವರಿಯಾಗಿ ಸೇರಿಸಿಕೊಳ್ಳುವುದು. ಬಿಡದಿ ಸಮಗ್ರ ಉಪನಗರ ಯೋಜನೆ ವ್ಯಾಪ್ತಿಯಲ್ಲಿ ಬರುವಂತಹ ಪರಿಷ್ಕೃತ ಗ್ರಾಮಗಳ ಮತ್ತು ವಿಸ್ತೀರ್ಣವಿರುವ ಪಟ್ಟಿಯನ್ನು ಅನುಬಂಧ-1ರಲ್ಲಿ ಸೂಚಿಸಲಾಗಿದೆ.

(ii) ಈ ಬಿಡದಿ ಸಮಗ್ರ ಉಪನಗರ ಅಭಿವೃದ್ಧಿ ಯೋಜನೆಯಡಿ ಅನುಬಂಧ-2ರಲ್ಲಿ ಸೂಚಿಸಿರುವಂತೆ ಜಮೀನು/ಮನೆ/ನಿವೇಶನವನ್ನು ಕಳೆದುಕೊಂಡು ಸ್ಥಳಾಂತರಗೊಳ್ಳುತ್ತಿರುವ ಬಾಧಿತ ನಿವಾಸಿ/ಕುಟುಂಬಗಳಿಗೆ ನೀಡಲಾಗುವ ಭೂಪರಿಹಾರ ಮತ್ತು ಪುನರ್ವಸತಿ ಪ್ಯಾಕೇಜ್‌ಗೆ ಅನುಮೋದನೆ .

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಪ್ರೇಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ-1**

(ಸರ್ಕಾರದ ಆದೇಶ ಸಂಖ್ಯೆ: ನಅಇ30ಬಿಎಂಆರ್ 2007, ಬೆಂಗಳೂರು ದಿನಾಂಕ: 11.6.2007ಗೆ)

**ಬಿಡದಿ ಸಮಗ್ರ ಉಪನಗರ ಯೋಜನಾ ಪ್ರದೇಶದಡಿ ಬರುವ ಗ್ರಾಮಗಳ ಮತ್ತು ವಿಸ್ತೀರ್ಣಗಳ ಪರಿಷ್ಕೃತ ಪಟ್ಟಿ**

**(ಅಂದಾಜು ವಿಸ್ತೀರ್ಣ ಎಕರೆಗಳಲ್ಲಿ)**

| ಕ್ರ.ಸಂ. | ಗ್ರಾಮದ ಹೆಸರು | ಖಾಸಗಿ ಜಮೀನು | ಸರ್ಕಾರಿ ಜಮೀನು | ಕೆರೆ / ಕುಂಟೆಗಳು | ಒಟ್ಟು |
|---|---|---|---|---|---|
| 01 | ಬೈರಮಂಗಲ | 897.08 | 373.30 | 82.02 | 1353.00 |
| 02. | ಬನ್ನಿಗಿರಿ | 462.30 | 421.09 | 320.20 | 1204.19 |
| 03. | ಹೊಸೂರು | 2027.17 | 471.09 | 64.01 | 2562.27 |

| 04. | ಕೆ.ಜಿ. ಗೊಲ್ಲರಪಾಳ್ಯ | 221.27 | 95.06 | 33.37 | 350.30 |
|---|---|---|---|---|---|
| 05. | ಕಂಚುಗಾರನಹಳ್ಳಿ | 1185.07 | 328.17 | 62.14 | 1575.38 |
| 06. | ಅರಳಾಳುಸಂದ್ರ | 1080.25 | 351.21 | 35.25 | 1467.31 |
| 07. | ಕೆಂಪಯ್ಯನಪಾಳ್ಯ | 264.04 | 133.02 | ಇಲ್ಲ | 397.06 |
| 08. | ಕಂಚುಗಾರನಹಳ್ಳಿ ಕಾವಲ್ | 87.12 | ಇಲ್ಲ | 24.09 | 111.21 |
| 09. | ಮಂಡ್ಲಹಳ್ಳಿ | 47.27 | 24.07 | 20.27 | 92.21 |
| 10. | ವಡೇರಹಳ್ಳಿ | 62.36 | ಇಲ್ಲ | ಇಲ್ಲ | 62.36 |
| | **ಒಟ್ಟು** | **6336.33** | **2198.21** | **643.15** | **9178.29** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಪ್ರೇಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–2**

(ಸರ್ಕಾರದ ಆದೇಶ ಸಂಖ್ಯೆ: ನಅಇ 30ಬಿಎಂಆರ್ 2007, ಬೆಂಗಳೂರು ದಿನಾಂಕ: 11.06.2007)

**ಬಿಡದಿ ಸಮಗ್ರ ಉಪನಗರ ಯೋಜನೆ**

**ವಿಷಯ:** ಯೋಜನೆಯಡಿ ಸ್ಥಳಾಂತರಗೊಳ್ಳುವ ವ್ಯಕ್ತಿ ಮತ್ತು ಕುಟುಂಬಗಳಿಗೆ ನೀಡಬೇಕಿರುವ ಭೂ ಪರಿಹಾರ ಮತ್ತು ಪುರ್ನವಸತಿ ಪ್ಯಾಕೇಜ್‌ನ ವಿವರಗಳು

1. **ಅನ್ವಯಿಸುವಿಕೆ:**

a) ಈ ಬಿಡದಿ ಸಮಗ್ರ ಉಪನಗರ ಅಭಿವೃದ್ಧಿ ಯೋಜನೆಯಡಿ ಸ್ಥಳಾಂತರಗೊಳ್ಳುವ ವ್ಯಕ್ತಿ/ಕುಟುಂಬ/(PDPs/PDFs)ಗಳಿಗೆ ಈ ರೂಢಿಗತ ಭೂಸ್ವಾಧೀನ ಪರಿಹಾರ ಮತ್ತು ಪುರ್ನವಸತಿ ವ್ಯವಸ್ಥೆಯ ಸಮಗ್ರ ಪ್ಯಾಕೇಜ್ ಅನ್ವಯಿಸುತ್ತದೆ. ಈ ಪ್ಯಾಕೇಜ್‌ನ್ನು, ಯೋಜನೆಯ ವಿಶೇಷ ಸ್ವರೂಪ ಹಾಗೂ ಸ್ಥಳವನ್ನು ಗಮನದಲ್ಲಿಟ್ಟುಕೊಂಡು ತಯಾರಿಸಿದ್ದು, ಇದನ್ನು ಇತರೆ ಯೋಜನೆ/ಸ್ಥಳಗಳಿಗೆ ಅನ್ವಯಿಸುವ ಸಾರ್ವತ್ರಿಕ ಪ್ಯಾಕೇಜ್/ಪೂರ್ವ ನಿರ್ದೇಶನವೆಂದು ಯಾವುದೇ ಅರ್ಥ ಕಲ್ಪಿಸಬಾರದು. ಇತರೆ ಯಾವುದೇ ಯೋಜನೆಗಳಿಗೆ ಪ್ರತ್ಯೇಕವಾಗಿ ಪ್ರಸ್ತಾವನೆಯನ್ನು ತಯಾರಿಸಿ ಸೂಕ್ತ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

b) ಈ ಯೋಜನೆಯಡಿ ಸ್ಥಳಾಂತರಗೊಳ್ಳುವ ಕುಟುಂಬಗಳಿಗೆ (PDFs) ನೀಡಲಿರುವ ವರ್ಗವಾರು ಪ್ಯಾಕೇಜ್‌ನ ವಿವರ:
   i) ಈ ಯೋಜನೆಯಡಿ ಭೂಸ್ವಾಧೀನದಿಂದ ಜಮೀನುಗಳನ್ನು ಕಳೆದುಕೊಂಡ ಭೂ ಮಾಲೀಕರುಗಳು
   ii) ಗ್ರಾಮಠಾಣದಲ್ಲಿ ಮನೆ ಮತ್ತು ನಿವೇಶನವನ್ನು ಕಳೆದುಕೊಂಡವರು ಸೇರಿದಂತೆ ಈ ITP ಯೋಜನಾ ಪ್ರದೇಶದ ವ್ಯಾಪ್ತಿಯಿಂದ ಸ್ಥಳಾಂತರಗೊಂಡ ವ್ಯಕ್ತಿ / ಕುಟುಂಬಗಳು.
   iii) ಯಾವುದೇ ಜಮೀನು, ಮನೆ ಅಥವಾ ನಿವೇಶನಗಳನ್ನು ಹೊಂದಿದ ಯೋಜನಾ ಪ್ರದೇಶದಿಂದ ಸ್ಥಳಾಂತರಗೊಂಡ ನಿವಾಸಿ/ಕುಟುಂಬಗಳು.

2. **ವ್ಯಾಖ್ಯಾನಗಳು (Definitions):–**

a) "ಸ್ಥಳಾಂತರಗೊಂಡ ನಿವಾಸಿ" ಎಂದರೆ ಯಾವ ನಿವಾಸಿ ವ್ಯಕ್ತಿ ಗ್ರಾಮಠಾಣ ಸೇರಿದಂತೆ ಯೋಜನಾ ಪ್ರದೇಶದಲ್ಲಿ ಜಮೀನು/ಮನೆ/ನಿವೇಶನವನ್ನು ಹೊಂದಿರುವವರು. ಅಥವಾ ಯಾವುದೇ ಜಮೀನಿನಲ್ಲಿ ನಿವೇಶನವನ್ನು ಮಾಲೀಕತ್ವವಿಲ್ಲದೇ ಇರುವ ನಿವಾಸಿಗಳು ಮತ್ತು ಈ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ KIAD ಕಾಯ್ದೆ 1966ರ ವಿಧಿ 28 (1)ರ ಅಧಿಸೂಚನೆ ಹೊರಡಿಸುವ ಮುನ್ನಾ ಕನಿಷ್ಠ 3 ವರ್ಷಗಳ ಕಾಲ ಸಾಮಾನ್ಯ ನಿವಾಸಿಯಾಗಿರಬೇಕು ಅಥವಾ ಜಮೀನನ್ನು ಸಾಗುವಳಿ ಮಾಡಿರುವುದು ಅಥವಾ ಈ ಯೋಜನಾ ಪ್ರದೇಶದಲ್ಲಿ ಯಾವುದೇ ಕೆಲಸ, ವ್ಯಾಪಾರ ಅಥವಾ ವೃತ್ತಿಯಲ್ಲಿ ತೊಡಗಿರುವಂತವರುಗಳು ಮತ್ತು ಈ ಭೂಸ್ವಾಧೀನದಿಂದ ಸ್ವಯಂಪ್ರೇರಿತವಲ್ಲದೆ ಅವನು ಅಥವಾ ಅವಳು ತಮ್ಮ ತಮ್ಮ ವಾಸ ಸ್ಥಳದಿಂದ ಅಥವಾ ಕೆಲಸದಿಂದ ಸ್ಥಳಾಂತರಗೊಳ್ಳುತ್ತಿರುವವರು.
   (i) ಗ್ರಾಮಠಾಣಗಳನ್ನೊಳಗೊಂಡ ಈ ಯೋಜನಾ ಪ್ರದೇಶದಲ್ಲಿ ಕನಿಷ್ಠ 3 ವರ್ಷಗಳ ವಾಸದ ಅವಧಿಯನ್ನು ನಿಗದಿಸುವ ಬಗ್ಗೆ ಸಾಬೀತುಪಡಿಸಲು ಮತದಾರರ ಪಟ್ಟಿ ಪಡಿತರ ಚೀಟಿ, ಬ್ಯಾಂಕ್ ಪಾಸ್ ದಾಖಲೆಗಳ ಪ್ರತಿ ಮತ್ತು ಪುರ್ನವಸತಿ ಸಮಿತಿ ನಿಗದಿಸುವ ಇನ್ನಿತರೆ ದಾಖಲೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.
   (ii) ಸಾಮಾನ್ಯವಾಗಿ ಗ್ರಾಮಠಾಣದಲ್ಲಿ ಅಥವಾ ಯೋಜನಾ ಪ್ರದೇಶದ ಜಮೀನಿನಲ್ಲಿ ವಾಸಿಸದೆ ಇರುವಂತಹ ಮತ್ತು ಜಮೀನನ್ನು ಸಾಗುವಳಿ ಮಾಡಿದಂತಹವರುಗಳಿಗೆ ಭೂ ಪರಿಹಾರ ಹಾಗೂ ಮಾಲ್ಕಿಗಳ ಮೌಲ್ಯವನ್ನು ನೀಡಲಾಗುವುದು. ಆದರೆ ಇವರುಗಳು ಇನ್ನಿತರೆ ಯಾವುದೇ ಪುನರ್ವಸತಿ ಪ್ಯಾಕೇಜ್‌ಗೆ ಅರ್ಹರಾಗಿರುವುದಿಲ್ಲ.

b) **"ಸ್ಥಳಾಂತರಗೊಳ್ಳುವ ಕುಟುಂಬ"**ವೆಂದರೆ ಸ್ಥಳಾಂತರಗೊಳ್ಳುವ ವ್ಯಕ್ತಿಯ ಕುಟುಂಬ ಅವನು ಅಥವಾ ಅವಳ ದಂಪತಿ, ಅಪ್ರಾಪ್ತ ಗಂಡು ಮಕ್ಕಳು, ಮದುವೆಯಾಗದ ಹೆಣ್ಣುಮಕ್ಕಳು, ಅಪ್ರಾಪ್ತ ಅಣ್ಣತಮ್ಮಂದಿರು, ಅಕ್ಕತಂಗಿಯರುಗಳು, ತಂದೆ

ಮತ್ತು ತಾಯಿ ಮತ್ತು ಇವರೊಡನೆ ವಾಸಿಸುವ ಕುಟುಂಬ ಸದಸ್ಯರು ಹಾಗೂ ಇವರನ್ನೇ ಜೀವನಕ್ಕೆ ಆಶ್ರಯಿಸಿರುವವರು. ಇವರುಗಳು ಈ ಯೋಜನಾ ಪ್ರದೇಶದಲ್ಲಿ ಭೂ ಸ್ವಾಧೀನಪಡಿಸಿಗೊಂಡ ಜಮೀನಿನಲ್ಲಿ (ಗ್ರಾಮಠಾಣದ ಮನೆ/ನಿವೇಶನ ಸೇರಿದಂತೆ)1966ನೇ KIAD ಕಾಯ್ದೆಯ ವಿಧಿ 28(1)ರ ಅಧಿಸೂಚನೆ ಪ್ರಕಟಣೆಗೊಳ್ಳುವ ದಿನಾಂಕದ ಮುನ್ನ ಕನಿಷ್ಠ 3 ವರ್ಷಗಳು ವಾಸವಾಗಿರಬೇಕು.

c) **"ಒತ್ತುವರಿದಾರ"** ಎಂದರೆ KIAD ಕಾಯ್ದೆ 1966ರ ವಿಧಿ 28(1)ರ ಅಧಿಸೂಚನೆ ಪ್ರಕಟಗೊಳ್ಳುವ ದಿನಾಂಕದ ಮುನ್ನ ಕನಿಷ್ಠ 3 ವರ್ಷಗಳ ಅವಧಿಗೆ ಯಾವುದೇ ವ್ಯಕ್ತಿ ಸರ್ಕಾರಿ/ಅರಣ್ಯ/ಪಂಚಾಯತ್ ಜಮೀನಿನಲ್ಲಿ ಸರಿಯಾದಂತಹ ಭೂಮಾಲೀಕತ್ವದ ದಾಖಲೆ ಇಲ್ಲದೆ ವಾಸ ಅಥವಾ ಕೃಷಿ ಚಟುವಟಿಕೆಯಲ್ಲಿ ತೊಡಗಿರುವವರು.

d) **"ಪಹಣಿ ಹೊಂದಿರುವವರು"** ಎಂದರೆ ಈ ಯೋಜನೆಯಡಿ ಸ್ಥಳಾಂತಗೊಂಡ ವ್ಯಕ್ತಿಯ ಹೆಸರು ಹಕ್ಕು ದಾಖಲೆಗಳು, ಗೇಣಿ ಮತ್ತು ಬೆಳೆಗಳು (RTC)ಯಲ್ಲಿ KIAD ಕಾಯ್ದೆ 1966ರ ವಿಧಿ 28(1)ರ ಅಧಿಸೂಚನೆ ಪ್ರಕಟಗೊಂಡ ದಿನಾಂಕ್ಕಕೆ ಭೂ ಮಾಲೀಕನೆಂದು ದಾಖಲಾಗಿರುವ ಒಂದು ಹೆಸರು ಯಾವ ಪಹಣಿಯಲ್ಲಿ ದಾಖಲೆಯಿದೆಯೋ ಅಂತಹವರು "ಏಕೈಕ ಪಹಣಿ ಹೊಂದಿರುವವ"ನೆಂದು ಮತ್ತು ಒಂದಕ್ಕಿಂತ ಜಾಸ್ತಿ ಹೆಸರುಗಳು ಪಹಣಿಯಲ್ಲಿ ದಾಖಲಾಗಿದ್ದಲ್ಲಿ ಅಂತಹವರುಗಳು "ಜಂಟಿ ಪಹಣಿ ಹೊಂದಿರುವವರು" ಎಂದು ತಿಳಿಯತಕ್ಕದ್ದು.

e) **"ಸಹ ಪಾಲುದಾರರು"** ಎಂದರೆ 1966ನೇ KIAD ಕಾಯ್ದೆಯ ವಿಧಿ 28(1)ರ ಅಧಿಸೂಚನೆ ಪ್ರಕಟಗೊಂಡ ದಿನಾಂಕಕ್ಕೆ ಏಕೈಕ ಪಹಣಿ ಹೊಂದಿರುವವನ, ವಯಸ್ಸು 18 ವರ್ಷ ದಾಟಿದಂತಹ ಇಬ್ಬರು ಪ್ರಾಪ್ತ ಮಕ್ಕಳು ಅಲ್ಲದೆ ಈ ಕೆಳಕಂಡವರು ಸಹ ಪಾಲುದಾರರು ಎಂದು ತಿಳಿಯತಕ್ಕದ್ದು.

1. ಏಕೈಕ ಪಹಣಿ ಹೊಂದಿರುವವನ ಆಶ್ರಿತಳಾಗಿ ಅವನ ಮನೆಯಲ್ಲಿ ವಾಸವಿರುವಂತಹ 18 ವರ್ಷದ ಮೇಲೆ ಇರುವ ಮದುವೆಯಾಗದ ಹೆಣ್ಣು ಮಗಳು.
2. ಜಂಟಿ ಪಹಣಿ ಹೊಂದಿರುವವನ ಪ್ರಕರಣದಲ್ಲಿ ಯಾವುದೇ ಸಹ ಪಾಲುದಾರರನ್ನು ಪರಿಗಣಿಸಲಾಗುವುದಿಲ್ಲ.

f) **"ಇತರೆ ಮನೆ ಹೊಂದಿರುವವ"** ಎಂದರೆ

1. ಯಾವುದೇ ಪಹಣಿ ಹೊಂದದೆ ಇರುವಂತಹ ಆದರೆ ಕ್ರಮಬದ್ಧವಾದ ಮನೆ ಹೊಂದಿರುವವ.
2. ಸರ್ಕಾರಿ/ಅರಣ್ಯ/ಪಂಚಾಯತ್ ಜಮೀನಿನಲ್ಲಿ ಒತ್ತುವರಿ ಮಾಡಿಕೊಂಡು ಈ ಯೋಜನೆಯ ಭೂಸ್ವಾಧೀನದಿಂದ ಮನೆ ಕಳೆದುಕೊಳ್ಳುವಂತಹವರು.
3. ಈ ಯೋಜನೆಯಿಂದಾಗಿ ಮನೆ ಮತ್ತು ವೃತ್ತಿಯನ್ನು ಕಳೆದುಕೊಳ್ಳುವ ಕೃಷಿ ಕಾರ್ಮಿಕ ಕುಟುಂಬಗಳು.

g) **"ಕ್ರಮಬದ್ಧ ಮನೆ ಹೊಂದಿರುವವ"** ಎಂದರೆ ಸಂಬಂಧ ಪಟ್ಟ ಗ್ರಾಮ ಪಂಚಾಯಿತಿಯಿಂದ ಮನೆ ನಂಬರುಗಳನ್ನು ಪಡೆದಿದ್ದು, ಅಲಾಯಿದ ಅಡಿಗೆ ಮನೆ ಮತ್ತು ವಿಧಿ 28(1) ಅಧಿಸೂಚನೆ ಪ್ರಕಟಗೊಂಡ ದಿನಾಂಕದ ಮುನ್ನಾ ಕನಿಷ್ಠ 3 ವರ್ಷಗಳ ಅವಧಿಗೆ ಪಂಚಾಯತ್‌ಗೆ ಮನೆ ಕಂದಾಯ ಕಟ್ಟಿದ ದಾಖಲೆ ಹೊಂದಿರುವವರು.

1. ಈ ಯೋಜನೆಯಿಂದ ಸ್ಥಳಾಂತರಗೊಂಡ ಕುಟುಂಬ ಹೆಸರು ಮೇಲಿನ ಒಂದಕ್ಕಿಂತ ಹೆಚ್ಚು ವರ್ಗಗಳಲ್ಲಿ ದಾಖಲಾಗಿದ್ದಲ್ಲಿ ಅಂತಹ ಕುಟುಂಬವು ಒಂದು ವರ್ಗದಡಿ ಮಾತ್ರ ಪರಿಹಾರ ಪಡೆಯತಕ್ಕದ್ದು.
2. ಈ ಪುನರ್ವಸತಿ ಯೋಜನೆಯಡಿ ನೀಡುವಂತಹ ಮನೆಯನ್ನು ಗಂಡ ಮತ್ತು ಹೆಂಡತಿಯರ ಹೆಸರುಗಳಲ್ಲಿ ಜಂಟಿಯಾಗಿ ನೀಡಲಾಗುವುದು.
3. **ಸಾಮಾಜಿಕ ಆರ್ಥಿಕ ಸಮೀಕ್ಷೆ:**
   ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದೊಂದಿಗೆ ಸಮಾಲೋಚಿಸಿ ಈ ಬಿಡದಿ ಸಮಗ್ರ ಉಪನಗರ ಯೋಜನೆಯ ಅಭಿವೃದ್ಧಿದಾರನು ಈ BITP ಪ್ರದೇಶದ ಸಾಮಾಜಿಕ ಆರ್ಥಿಕ ಸಮೀಕ್ಷೆಯನ್ನು ಕೈಗೊಳ್ಳುವುದು. ಈ ಸಮೀಕ್ಷಾ ವರದಿ / ಅಂಶಗಳನ್ನು ಪುಕ್ಕಟೆಯಾಗಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ಮತ್ತು ಬೇರೆಯವರಿಗೆ ಸಮಂಜಸವಾದ ಬೆಲೆಗೆ ನೀಡುವುದು.
4. **ಭೂಸ್ವಾಧೀನವಾದ ವಸತಿ / ವಾಣಿಜ್ಯ ಆಸ್ತಿಗಳಿಗೆ ಪರಿಹಾರ:**
   BITP ಯೋಜನೆಯಡಿ ಗ್ರಾಮಠಾಣ ಪ್ರದೇಶಗಳನ್ನು ಭೂ ಸ್ವಾಧೀನ ಮಾಡಿಕೊಳ್ಳಲು ಮತ್ತು ಇಲ್ಲಿರುವ ನಿವಾಸಿಗಳಿಗೆ ಇದೇ ಪ್ರದೇಶದಲ್ಲಿ ಹೊಸದಾಗಿ ಅಭಿವೃದ್ಧಿಗೊಳಿಸಿದ ಪುನರ್ವಸತಿ ಸಂಕೀರ್ಣಕ್ಕೆ ಸ್ಥಳಾಂತರಗೊಂಡ ವ್ಯಕ್ತಿ / ಕುಟುಂಬಕ್ಕೆ ಇದೇ ಯೋಜನಾ ವ್ಯಾಪ್ತಿಯಲ್ಲಿಯೆ ನಿರ್ಮಿಸಲಿರುವ ಹೊಸ ಪುನರ್ವಸತಿ ಸಂಕೀರ್ಣಗಳಲ್ಲಿಯೇ ವಾಸಿಸಬೇಕೆಂಬ ಸದುದ್ದೇಶವನ್ನು ಈ ಯೋಜನೆ ಹೊಂದಿದೆ. ಈ ಯೋಜನಾ ವ್ಯಾಪ್ತಿಯ ಗ್ರಾಮಗಳಲ್ಲಿ ವಾಸಿಸುವ ಜನರಿಗೆ ಇನ್ನು ಸುಧಾರಿಸಿದ ಗುಣಮಟ್ಟದ ಜೀವನ ನೀಡಲು ಈ ಕೆಳಕಂಡ ಪರ್ಯಾಯ ಪ್ಯಾಕೇಜ್‌ನ್ನು ನೀಡಲಾಗಿದೆ.

**A) ಗ್ರಾಮಠಾಣ ಪ್ರದೇಶದಲ್ಲಿ ಭೂಸ್ವಾಧೀನ ಮಾಡಿಕೊಂಡಂತಹ ವಸತಿ / ವಾಣಿಜ್ಯ ಆಸ್ತಿಗಳಿಗೆ ನಗದು ನೀಡುವ ಬದಲು ಪರಿಹಾರ:**

ಈ ಯೋಜನೆಯಿಂದಾಗಿ ಗ್ರಾಮಠಾಣಾ ಪ್ರದೇಶದಲ್ಲಿ ಹೊಂದಿದ್ದ ವಸತಿ ಅಥವಾ ವಾಣಿಜ್ಯ ಆಸ್ತಿಗಳಿಗೆ ಕಾನೂನಿನಂತೆ ನಗದು ಮೊತ್ತ ನೀಡುವ ಬದಲಾಗಿ ಪರಿಹಾರದ ರೂಪದಲ್ಲಿ ಮನೆ, ನಿವೇಶನ, ವಾಣಿಜ್ಯ ಮಳಿಗೆಗಳು ನಿವೇಶನಗಳನ್ನು ಈ ಕೆಳಕಂಡಂತೆ ನೀಡಲಾಗುತ್ತದೆ.

| ಕ್ರ. ಸಂ. | ಗ್ರಾಮಠಾಣದಲ್ಲಿ ಹಾಲಿ ಇರುವ ವ್ಯವಸ್ಥೆ | ನಗದಿಗೆ ಬದಲಾಗಿ ಪ್ರಸ್ತಾಪಿಸಿರುವ ಪರಿಹಾರ |
|---|---|---|
| 1. | 600 ಚ.ಅಡಿ ಅಥವಾ ಇದಕ್ಕಿಂತ ಕಡಿಮೆ ವಿಸ್ತೀರ್ಣವಿರುವ ನಿವೇಶನದಲ್ಲಿ ವಾಸದ ಮನೆ ಹೊಂದಿರುವವರು. | 900 ಚ.ಅಡಿಯ ನಿವೇಶನದಲ್ಲಿ ನಿರ್ಮಿಸಲಾದ 680 ಚ.ಅಡಿಯ ವಾಸದ ಮನೆ. |
| | 600 ಚ.ಅಡಿಯ ಮೇಲೆ 900 ಚ.ಅಡಿ ಒಳಗೆ ಇರುವ ವಿಸ್ತೀರ್ಣದ ನಿವೇಶನದಲ್ಲಿ ವಾಸದ ಮನೆ ಹೊಂದಿರುವವರು | 1200 ಚ.ಅಡಿಯ ನಿವೇಶನದಲ್ಲಿ ನಿರ್ಮಿಸಲಾದ 680 ಚ.ಅಡಿಯ ವಾಸದ ಮನೆ |
| 2. | 900 ಚ.ಅಡಿಯ ಮೇಲೆ 1200 ಚ.ಅಡಿ ಒಳಗೆ ಇರುವ ವಿಸ್ತೀರ್ಣದ ನಿವೇಶನದಲ್ಲಿ ವಾಸದ ಮನೆ ಹೊಂದಿರುವವರು | 1800 ಚ.ಅಡಿಯ ನಿವೇಶನದಲ್ಲಿ ನಿರ್ಮಿಸಲಾದ 1200 ಚ.ಅಡಿಯ ವಾಸದ ಮನೆ |
| | 1200 ಚ.ಅಡಿಯ ಮೇಲೆ 1800 ಚ.ಅಡಿ ಒಳಗೆ ಇರುವ ವಿಸ್ತೀರ್ಣದ ನಿವೇಶನದಲ್ಲಿ ವಾಸದ ಮನೆ ಹೊಂದಿರುವವರು. | 2400 ಚ.ಅಡಿಯ ನಿವೇಶನದಲ್ಲಿ ನಿರ್ಮಿಸಲಾದ 1200 ಚ.ಅಡಿಯ ವಾಸದ ಮನೆ. |
| 3. | 1800 ಚ.ಅಡಿಯ ಮೇಲೆ 2400 ಚ.ಅಡಿ ಒಳಗೆ ಇರುವ ವಿಸ್ತೀರ್ಣ ನಿವೇಶನದಲ್ಲಿ ವಾಸದ ಮನೆ ಹೊಂದಿರುವವರು. | 3600 ಚ.ಅಡಿಯ ನಿವೇಶನದಲ್ಲಿ ನಿರ್ಮಿಸಲಾದ 1400 ಚ.ಅಡಿಯ ವಾಸದ ಮನೆ. |
| 4. | 2400 ಚ.ಅಡಿಗಿಂತ ಮೇಲೆ ಇರುವ ನಿವೇಶನದಲ್ಲಿ ಮನೆ ಹೊಂದಿರುವವರು. | 3600 ಚ.ಅಡಿ ನಿವೇಶನದಲ್ಲಿ ನಿರ್ಮಿಸಲಾದ 1800 ಚ.ಅಡಿ ವಿನ್ಯಾಸದ ಮನೆ. |
| 5. | ಖಾಲಿ ನಿವೇಶನ (ಯಾವುದೇ ಮನೆ ಕಟ್ಟಿಲ್ಲದಿರುವುದು) | ಭೂಸ್ವಾಧೀನವಾದ ನಿವೇಶನದ ಶೇ. 150 ರಷ್ಟು ವಿಸ್ತೀರ್ಣದ ಪರ್ಯಾಯ ನಿವೇಶನ. |
| 6. | ವಾಣಿಜ್ಯ ಕಟ್ಟಡಗಳು (ಅಂಗಡಿಗಳು) | ಭೂಸ್ವಾಧೀನಗೊಳಿಸಲ್ಪಟ್ಟ ವಾಣಿಜ್ಯ ಕಟ್ಟಡದ ಶೇ. 150 ರಷ್ಟು ವಿನ್ಯಾಸದ ವಾಣಿಜ್ಯ ಮಳಿಗೆ |

**ಟಿಪ್ಪಣಿ:**

a) ಇತ್ತೀಚೆಗೆ ಕರ್ನಾಟಕ ಗೃಹ ಮಂಡಳಿ ನಿರ್ಮಿಸುತ್ತಿರುವ ಮನೆಗಳ ಮಾದರಿಯಲ್ಲಿಯೇ ಈ ಮನೆಗಳನ್ನು ನಿರ್ಮಿಸಿ ಕೊಡುವುದು.

b) ಇದಲ್ಲದೆ ಅಲಾಯಧವಾಗಿ ಮಾಲ್ಕಿ ಬೆಲೆಯನ್ನು ಆಯಾ ಪ್ರಾಧಿಕಾರದಿಂದ ನಿರ್ಧರಿಸಿಕೊಂಡ ಅಥವಾ ಒಪ್ಪಂದದ ಮುಖೇನ ಪಾವತಿಸಲಾಗುತ್ತದೆ.

c) ಇದಲ್ಲದೆ ಬೇರಾವ ಪರಿಹಾರವನ್ನು ಜಮೀನು ಅಥವಾ ನಿರ್ಮಾಣಗಳಿಗೆ ಪಾವತಿಸಲಾಗುವುದಿಲ್ಲ.

d) ಈ ಯೋಜನೆಯಿಂದ ಸ್ಥಳಾಂತರಗೊಂಡ ಕುಟುಂಬಕ್ಕೆ ನೀಡಬೇಕಿರುವ ನಿವೇಶನ/ಮನೆ/ಮಳಿಗೆಗಾಗಿ ಈ ಯೋಜನಾ ಪ್ರದೇಶದ ಒಂದು ಕಡೆ ಅಭಿವೃದ್ಧಿದಾರನು ಮತ್ತು ಬಿಎಂಆರ್‌ಡಿಎ/ಪುನರ್ವಸತಿ ಸಮಿತಿಯೊಂದಿಗೆ ಸಮಾಲೋಚಿಸಿದ ನಂತರ ಗುರ್ತಿಸಿ ನಿರ್ಧರಿಸಬೇಕಾಗುತ್ತದೆ. ಆದರೆ ಸ್ಥಳಾಂತರಗೊಳ್ಳುವ ಕುಟುಂಬದಾರನು ತನಗೆ ಪುರ್ನವಸತಿ ಪ್ರದೇಶದ ಇಂತಹದೆ ಕಡೆ ನೀಡಬೇಕೆಂದು ಕೇಳುವ ಹಾಗೆ ಇಲ್ಲ.

**B) ಸಾರಿಗೆ ಮತ್ತು ಸ್ಥಳಾಂತರ ಅನುದಾನ ಹಾಗೂ ಜೀವನಾಧಾರ ಭತ್ಯೆ:–**

ಪ್ರತಿಯೊಂದು ಸ್ಥಳಾಂತರಗೊಂಡ ವ್ಯಕ್ತಿ/ಕುಟುಂಬಕ್ಕೆ ಈ ಮೇಲಿನ ಕಂಡಿಕೆ 'A'ನಲ್ಲಿ ಸೂಚಿಸಿದ ಮನೆ / ನಿವೇಶನ ಮತ್ತಿತರೆ ಜೊತೆಗೆ ಈ ಕೆಳಕಂಡ ಮೊತ್ತವನ್ನು ಸಹ ಪಾವತಿಸುವುದು.

a) ರೂ. 10,000/– (ಹತ್ತು ಸಾವಿರ ರೂಪಾಯಿಳು ಮಾತ್ರ) ಸಾರಿಗೆ ಮತ್ತು ಸ್ಥಳಾಂತರ ಅನುದಾನ ಮತ್ತು

b) ರೂ. 20,000/– (ಇಪ್ಪತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಜೀವನಾಧಾರ ಭತ್ಯೆ ಎಂದು ಸಹ ನೀಡುವುದು.

**C) ಮನೆ/ನಿವೇಶನ/ಮಳಿಗೆ ಇತ್ಯಾದಿಗಳ ಬದಲಾಗಿ ನಗದು ಪರಿಹಾರ:–**

ಈ ಮೇಲ್ಕಂಡ A ಮತ್ತು B ಪ್ಯಾಕೇಜ್‌ಗಳಲ್ಲಿ ಕಾಣಿಸಿರುವ ಪರಿಹಾರಗಳೆಲ್ಲವು ಕಾನೂನಿನಡಿ ದೊರಕುವ ಪರಿಹಾರಕ್ಕೆ ಪರ್ಯಾಯವಾಗಿದ್ದು, ಇದರಿಂದ ಸ್ಥಳಾಂತರಗೊಳ್ಳುವ ವ್ಯಕ್ತಿ/ಕುಟಂಬವು ಇನ್ನು ಸುಧಾರಿತವಾದ ಜೀವನ ನಡೆಸಲಿ ಎಂಬ ಉದ್ದೇಶವನ್ನಿಟ್ಟುಕೊಂಡು ನೀಡಲಾಗಿದೆ. ಈ ಪರ್ಯಾಯ ವ್ಯವಸ್ಥೆಯನ್ನು ಇಚ್ಚೆಪಡದಂತಹ ಸ್ಥಳಾಂತರಗೊಳ್ಳುವ ವ್ಯಕ್ತಿ/ಕುಟುಂಬಗಳಿಗೆ, ತಾನು ಕಳೆದುಕೊಳ್ಳುವ ಮನೆ/ನಿವೇಶನ/ಮಳಿಗೆ ಮತ್ತಿತರೆ ಮಾಲ್ಕಿ ವಗ್ಯೆರೆಯನ್ನು KIAD ಕಾಯ್ದೆಯಂತೆ ಸಂಬಂಧಪಟ್ಟ ಪ್ರಾಧಿಕಾರದಿಂದ ಮೌಲ್ಯವನ್ನು ನಿಗದಿಪಡಿಸಿ ಪಾವತಿಸಲಾಗುವುದು.

**D) ಗ್ರಾಮಠಾಣ ಪ್ರದೇಶದ ಹೊರಗೆ ಸ್ವಾಧೀನ ಪಡಿಸಿಕೊಂಡಂತಹ ವಸತಿ/ವಾಣಿಜ್ಯ ಆಸ್ತಿಗಳಿಗೆ ಪರಿಹಾರ:–** ಈ ಯೋಜನಾ ಪ್ರದೇಶದ ವ್ಯಾಪ್ತಿಯೊಳಗೆ ಬರುವ ಗ್ರಾಮಠಾಣ ಪ್ರದೇಶಗಳ ಹೊರಗೆ ಇರುವಂತಹ ವಸತಿ, ವಾಣಿಜ್ಯ ಆಸ್ತಿಗಳನ್ನು ಭೂಸ್ವಾಧೀನಪಡಿಸಿಕೊಂಡಾಗ ಈ ಮೇಲಿನ ಕಂಡಿಕೆ B ಮತ್ತು C ನಲ್ಲಿ ಕಾಣಿಸಿರುವಂತೆ ಪರಿಹಾರವನ್ನು ನೀಡಲಾಗುವುದು.

**E) ಜಮೀನು/ಮನೆ/ನಿವೇಶನ ರಹಿತ ಕುಟುಂಬಗಳಿಗೆ ನೀಡುವ ಪರಿಹಾರ:**

a) ಈ ಯೋಜನಾ ಪ್ರದೇಶದಲ್ಲಿ ಕೆಲವೊಂದು ಸ್ಥಳಾಂತರಗೊಂಡ ನಿವಾಸಿ/ಕುಟುಂಬಗಳು ಯಾವುದೆ ಮನೆ, ನಿವೇಶನ ಅಥವಾ ಕೃಷಿ ಜಮೀನುಗಳನ್ನು ಹೊಂದಿರುವುದಿಲ್ಲ. ಇಂತಹ ಆಸ್ತಿ ರಹಿತ ಸ್ಥಳಾಂತರಗೊಳ್ಳುವ ನಿವಾಸಿ/ಕುಟುಂಬಗಳು, ಬಾಡಿಗೆ ಆಸ್ತಿಗಳಲ್ಲಿ ವಾಸಿಸುತ್ತಿರುವ ಕಾರಣ ಇವರುಗಳು ಯಾವುದೇ ಪರಿಹಾರಕ್ಕೆ ಅರ್ಹರಲ್ಲ. ಆದರೂ ಸಾಮಾಜಿಕ ಭದ್ರತೆ ಮತ್ತು ಮಾನವೀಯ ದೃಷ್ಟಿಯಿಂದ ಇಂತಹ ಎಲ್ಲಾ ಜಮೀನು / ಮನೆ/ ನಿವೇಶನ ರಹಿತ ಸ್ಥಳಾಂತರಗೊಳ್ಳುವ ನಿವಾಸಿ/ಕುಟುಂಬಗಳಿಗೆ ಇದೇ ಯೋಜನಾ ಪ್ರದೇಶದಲ್ಲಿಯೆ ಬಾಡಿಗೆ ಮನೆಗಳನ್ನು ಅಭಿವೃದ್ಧಿದಾರನೆ (Developer) ಕಟ್ಟಿಸಿ ಕೊಡಬೇಕಾಗುತ್ತದೆ. ಈ ಬಾಡಿಗೆ ಮನೆಗಳಿಗೆ ಮಾಸಿಕ ಬಾಡಿಗೆಯನ್ನು ಬಾಡಿಗೆದಾರನ ಆರ್ಥಿಕ ಪರಿಸ್ಥಿತಿಯನ್ನು (Capacity to Pay) ಗಮನದಲ್ಲಿಟ್ಟುಕೊಂಡು ಅಭಿವೃದ್ಧಿದಾರನು ಬಿಎಂಆರ್‌ಡಿಎ ಮತ್ತು ಪುರ್ನವಸತಿ ಸಮಿತಿಗಳ ಶಿಫಾರಸ್ಸಿನ ಮೇರೆಗೆ ನಿಗದಿಪಡಿಸುವುದು.

**b) ಆಸ್ತಿಗಳಿಲ್ಲದ ಸ್ಥಳಾಂತರಗೊಳ್ಳುವಂತಹ ನಿವಾಸಿ / ಕುಟುಂಬಗಳಿಗೆ ಹಣಕಾಸಿನ ಸಹಾಯ:–**

ಈ ಮೇಲಿನ ಬಾಡಿಗೆ ಮನೆಗಳನ್ನು ಪಡೆದುಕೊಳ್ಳುವುದಲ್ಲದೆ, ಪ್ರತಿಯೊಂದು ಆಸ್ತಿ ರಹಿತ ಸ್ಥಳಾಂತರಗೊಂಡ ನಿವಾಸಿ ಕುಟುಂಬಕ್ಕೆ ಒಮ್ಮೆ ಮಾತ್ರ ರೂ. 30,000/– (ಮುವತ್ತು ಸಾವಿರ ರೂ.ಗಳನ್ನು) ಹಣಕಾಸಿನ ನೆರವಾಗಿ ನೀಡಲಾಗುತ್ತದೆ.

**5. ಕೃಷಿ ಜಮೀನುಗಳಿಗೆ ಪರಿಹಾರ:–**

ಈ ಬಿಡದಿ ಸಮಗ್ರ ಉಪನಗರ ಅಭಿವೃದ್ಧಿ ಯೋಜನಾ ಪ್ರದೇಶದಲ್ಲಿ ಕೃಷಿ ಜಮೀನನ್ನು ಕಳೆದುಕೊಳ್ಳುವ ಭೂಮಾಲೀಕರುಳಿಗೆ ಈ ಕೆಳಕಂಡ ಎರಡು ಪರ್ಯಾಯ ಪರಿಹಾರ ಆಯ್ಕೆಗಳು ಲಭ್ಯವಿರುತ್ತವೆ.

**A) ಕೃಷಿ ಜಮೀನುಗಳಿಗೆ ನಗದು ಪರಿಹಾರ:**

(ರೂ. ಲಕ್ಷಗಳಲ್ಲಿ ಪ್ರತಿ ಎಕರೆಗೆ)

| ವರ್ಗ | ವ್ಯಾಖ್ಯೆ | ಖುಷ್ಕಿ | ತರಿ | ಭಾಗಾಯ್ತು |
|---|---|---|---|---|
| ಅ. | ಪ್ರಾದೇಶಿಕ ಹೆದ್ದಾರಿಗಳ ಪಕ್ಕ ಬರುವ ಜಮೀನುಗಳು | 22.00 | 23.00 | 25.00 |
| ಆ. | ಗ್ರಾಮಠಾಣ ಮತ್ತು ಗ್ರಾಮ ರಸ್ತೆಯ ಪಕ್ಕ ಬರುವ ಜಮೀನುಗಳು | 21.00 | 22.00 | 23.00 |
| ಇ. | ಗ್ರಾಮೀಣ ರಸ್ತೆಯ ಪಕ್ಕದಲ್ಲಿ ಬರುವ ಜಮೀನು | 20.0 | 21.00 | 22.00 |
| ಈ. | ರಸ್ತೆಯ ಸಂಪರ್ಕವಿಲ್ಲದೆ ಒಳಗಡೆ ಬರುವ ಜಮೀನುಗಳು | 20.00 | 21.00 | 22.00 |

ಈ ಮೇಲ್ಕಂಡ ಜಮೀನುಗಳಿಗೆ ನಗದು ಪರಿಹಾರವಲ್ಲದೆ ಸದರಿ ಕೃಷಿ ಜಮೀನುಗಳಲ್ಲಿರುವ ಮಾಲ್ಕಿ ಮತ್ತು ನಿರ್ಮಾಣಗಳಿಗೆ ಅಲಾಯಿಧವಾಗಿ ಬೆಲೆ ನಿಗದಿಸಿ ಪಾವತಿಸಲಾಗುತ್ತದೆ.

**ಅಥವಾ**

**B) ಭೂಸ್ವಾಧೀನವಾದ ಕೃಷಿ ಜಮೀನುಗಳನ್ನು ಒಪ್ಪಿಸಿದಂತಹವರಿಗೆ ಅಭಿವೃದ್ಧಿಗೊಳಿಸಿದ ನಿವೇಶನಗಳನ್ನು ಪರಿಹಾರದ ರೂಪದಲ್ಲಿ ಹಂಚಿಕೆ:**

ಭೂಸ್ವಾಧೀನವಾದ ಪ್ರತಿ ಎಕರೆ ಜಮೀನಿಗೆ ಅಭಿವೃದ್ಧಿಪಡಿಸಿದಂತಹ 8000 ಚ.ಅಡಿ ನಿವೇಶನಗಳನ್ನು ಪರಿಹಾರ ರೂಪದಲ್ಲಿ ನೀಡುವುದು. ಇದರಲ್ಲಿ ಖುಷ್ಕಿ, ತರಿ ಮತ್ತು ಭಾಗಾಯ್ತು ಜಮೀನುಗಳು ಎಂಬ ತಾರತಮ್ಯವಿರುವುದಿಲ್ಲ. ಇದು ನಗದು ಪರಿಹಾರ ನೀಡುವುದರ ಬದಲಿ ವ್ಯವಸ್ಥೆಯಾಗುತ್ತದೆ. ಇದಲ್ಲದೆ ಭೂಸ್ವಾಧೀನವಾದ ಪ್ರತಿ ಎಕರೆ ಜಮೀನಿನಲ್ಲಿ ಇರುವಂತಹ ಮರ, ಮಾಲ್ಕಿ ಮತ್ತು ಕಟ್ಟಡಗಳಿಗೆ ಅಲಾಯುಧವಾಗಿ ದರಗಳನ್ನು ನಿಗದಿಸಿಕೊಂಡು ಪಾವತಿಸಲಾಗುವುದು. ಈ ಉಪನಗರ ಅಭಿವೃದ್ಧಿ ಯೋಜನೆಯ ಅಂಗವಾಗಿ ಜಮೀನು ಕಳೆದುಕೊಳ್ಳುವ ರೈತಬಾಂದವರಿಗೆ ನೀಡುವ ಸಲುವಾಗಿ ಅಭಿವೃದ್ಧಿಪಡಿಸುವ ಪ್ರದೇಶವನ್ನು ಖಾಸಗಿ ಅಭಿವೃದ್ಧಿದಾರರು (Developer) ಬಿಎಂಆರ್‌ಡಿಎಯೊಂದಿಗೆ ಸಮಾಲೋಚಿಸಿ ಗುರ್ತಿಸಲಾಗುವುದು ಹಾಗೂ ರೈತಬಾಂದವರು ಈ ಯೋಜನಾ ಪ್ರದೇಶದ ಇಂತಹುದೇ ನಿರ್ದಿಷ್ಟಪಡಿಸಿದಂತಹ ಪ್ರದೇಶದಲ್ಲಿಯೇ ಅಭಿವೃದ್ದಿಪಡಿಸಿದ ನಿವೇಶನವನ್ನು ನೀಡಬೇಕೆಂದು ಒತ್ತಾಯ ಮಾಡಲು ಅವಕಾಶವಿರುವುದಿಲ್ಲ.

**6) ಭೂ ಒತ್ತುವರಿದಾರನಿಗೆ ಪರಿಹಾರ:**

ಈ ಮೇಲ್ಕಂಡ ಕಂಡಿಕೆ 2(ಸಿ) ನಲ್ಲಿ ವ್ಯಾಖ್ಯಾನಿಸಿದಂಥಹ ಸರ್ಕಾರಿ/ಅರಣ್ಯ/ಪಂಚಾಯಿತಿ ಜಮೀನುಗಳಲ್ಲಿ ಒತ್ತುವರಿ ಮಾಡಿಕೊಂಡು ವಾಸಿಸುತ್ತಿರುವಂಥವರು ಈ ಒತ್ತುವರಿ ಜಮೀನಿಗೆ ಭೂ ಪರಿಹಾರ ಪಡೆಯಲು ಅರ್ಹರಲ್ಲ. ಆದರೆ ಸದರಿ ಜಮೀನುಗಳಲ್ಲಿ ಮಾಡಿದಂತಹ ಅಭಿವೃದ್ಧಿಗಳು ಅಂದರೆ ಕಟ್ಟಡ ಮತ್ತು ನಿರ್ಮಾಣಗಳಿಗೆ ಸಮಂಜಸವಾದ ಪರಿಹಾರವನ್ನು ಪಾವತಿಸಲಾಗುತ್ತಿದೆ.

**7) ಕರಾರು ಪತ್ರಗಳು:**

ಭೂಸ್ವಾಧೀನವಾಗಿ ಒಪ್ಪಿಸಲಾದಂತಹ ಜಮೀನುಗಳಿಗೆ ಕಾನೂನಿನಂತೆ ಭೂ ಪರಿಹಾರವನ್ನು (ಬಡ್ಡಿ ಮತ್ತಿತರೆ ಸೇರಿದಂತೆ) ನೀಡಲು ಅವಕಾಶವಿದ್ದರೂ ಈ ಮೇಲ್ಕಂಡ ಕಂಡಿಕೆ 4,5 ಮತ್ತು 6ರಲ್ಲಿ ಸೂಚಿಸಿರುವ ಪರಿಹಾರವನ್ನು ಪರ್ಯಾಯವಾಗಿ ನೀಡಲಾಗಿರುತ್ತದೆ. ಯೋಜನೆಯಿಂದ ಸ್ಥಳಾಂತರಗೊಂಡ ವ್ಯಕ್ತಿ/ಕುಟುಂಬದವರು ಈ ಪರ್ಯಾಯ ಪರಿಹಾರವನ್ನು ಅಯ್ಕೆ ಮಾಡಿಕೊಂಡಲ್ಲಿ ಅಂತಹ ಪ್ರತಿಯೊಬ್ಬರು ಸೂಕ್ತ ಪ್ರಾಧಿಕಾರದ ಮುಂದೆ KIAD ಕಾಯ್ದೆಯೆಂತೆ ಹಾಗೂ ಮತ್ತಿತರ ಕಾಯ್ದೆಯನ್ವಯ ಪಡೆಯಲು ಅವಕಾಶವಿರುವ (ನಗದು ಪರಿಹಾರವನ್ನು ಬಡ್ಡಿ ಮತ್ತಿತರೆ ಭತ್ಯೆಗಳು ಸೇರಿದಂತೆ) ಹಕ್ಕನ್ನು ಬಿಡುಗಡೆಗೊಳಿಸಿರುವುದಾಗಿ ಲಿಖಿತ ಕರಾರು ಪತ್ರಗಳ ಮುಖೇನ ಸಹಿ ಮಾಡಿ ನೀಡಬೇಕಾಗಿರುತ್ತದೆ.

**8) ಧಾರ್ಮಿಕ ಸ್ಥಳಗಳನ್ನು ಸ್ಥಳಾಂತರಿಸಿ ಪುನರ್ ಸ್ಥಾಪಿಸುವ ಬಗ್ಗೆ ಮಾರ್ಗಸೂಚಿಗಳು:**

a) ಪುನರ್‌ವಸತಿ ಸಮಿತಿಯು ನಿಗದಿಸುವ ವಿಸ್ತೀರ್ಣ ಮತ್ತು ಪ್ರದೇಶದಲ್ಲಿಯೇ ಧಾರ್ಮಿಕ ಸ್ಥಳಗಳನ್ನು ಅಭಿವೃದ್ಧಿದಾರನು ಸ್ಥಳಾಂತರಗೊಳಿಸಿ ಪುನರ್ ಸ್ಥಾಪಿಸುವುದು.

b) ಪುನರ್‌ವಸತಿ ಸಮಿತಿಯು ಪ್ರತಿ ಪ್ರಕರಣದಲ್ಲಿ ನಿಗದಿಸುವ ನಿರ್ಮಾಣದ ವೆಚ್ಚವನ್ನು ಅಭಿವೃದ್ಧಿದಾರನು ಭರಿಸಬೇಕಿರುತ್ತದೆ.

c) ಇದಲ್ಲದೆ ಸಮಿತಿಯು ತೀರ್ಮಾನಿಸಿದಂತೆ ವಿಗ್ರಹವನ್ನು ಬೇರೆ ಸ್ಥಳಕ್ಕೆ ಸ್ಥಳಾಂತರಿಸಲು ಅಗತ್ಯ ಅನುದಾನವನ್ನು ಸಹ ಪ್ರಕರಣವಾರು ಅಭಿವೃದ್ಧಿದಾರನೆ ಭರಿಸತಕ್ಕದ್ದು.

**9) ಪುನರ್‌ವಸತಿ ಸಮಿತಿ:**

ಪುನರ್‌ವಸತಿ ಕಾರ್ಯಕ್ರಮಗಳು ಮೇಲ್ವಿಚಾರಣೆ ಮಾಡುವ ಸಲುವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ಒಂದು ಪುನರ್‌ವಸತಿ ಸಮಿತಿಯನ್ನು ರಚಿಸಲಾಗಿದೆ.

| | |
|---|---|
| 1. | ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಅಧ್ಯಕ್ಷರು |
| 2. | ವಿಶೇಷ ಜಿಲ್ಲಾಧಿಕಾರಿಗಳು, KIADB ಬೆಂಗಳೂರು |
| 3. | ಉಪ ಮಹಾನಗರ ಆಯುಕ್ತರು, ಬಿಎಂಆರ್‌ಡಿಎ, ಬೆಂಗಳೂರು |
| 4. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯಿತಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| 5. | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 6. | ಹಿಂದುಳಿದ ವರ್ಗ ಮತ್ತು ಅಲ್ಪ ಸಂಖ್ಯಾತರ ಜಿಲ್ಲಾ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 7. | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಜಿಲ್ಲಾ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ |
| 8. | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯಿತಿ, ರಾಮನಗರ |
| 9. | ಅಭಿವೃದ್ಧಿದಾರನ ಇಬ್ಬರು ಪ್ರತಿನಿಧಿಗಳು, ಇದರಲ್ಲಿ ಒಬ್ಬರು ಪುರ್ನವಸತಿ ಸಮನ್ವಯ ಅಧಿಕಾರಿಯನ್ನು ಅಭಿವೃದ್ಧಿದಾರನು ನಾಮ ನಿರ್ದೇಶನ ಮಾಡತಕ್ಕದ್ದು. |
| 10. | ಈ ಯೋಜನೆಯಿಂದ ಬಾಧಿತರಾದ ಕುಟುಂಬಗಳ ಐವರು ಪ್ರತಿನಿಧಿಗಳ ಇವರುಗಳಲ್ಲಿ ಪರಿಶಿಷ್ಟ ಜಾತಿ/ಪಂಗಡ ಮತ್ತು ಮಹಿಳಾ ಸದಸ್ಯರು ಇರಬೇಕಿರುತ್ತದೆ. ಇವರುಗಳನ್ನು ಜಿಲ್ಲಾಧಿಕಾರಿಗಳು ನಾಮ ನಿರ್ದೇಶನ ಮಾಡತಕ್ಕದ್ದು. |
| 11. | ವಿಶೇಷ ಅಧಿಕಾರಿ ಬಿ.ಐ.ಟಿ.ಪಿ. ಯೋಜನೆ, ಬಿಎಂಆರ್‌ಡಿಎ, ಬೆಂಗಳೂರು ಸದಸ್ಯ ಕಾರ್ಯದರ್ಶಿ |

ಈ ಆರ್ ಮತ್ತು ಆರ್ ಪ್ಯಾಕೇಜ್ ಸುಸುತ್ರವಾಗಿ ಕಾರ್ಯಗತಗೊಳ್ಳಲು ಅನುಕೂಲವಾಗುವಂತೆ ಅಧ್ಯಕ್ಷರು ಸಮಿತಿಗೆ ಇತರೆ ಯಾವುದೇ ಅಧಿಕಾರಿ/ಕಾರ್ಯಕ್ಷೇತ್ರದ ಪರಿಣಿತರನ್ನು ಆಹ್ವಾನಿಸಬಹುದಾಗಿದೆ.

**10. ಪುನರ್‌ವಸತಿ ಮತ್ತು ಪುರ್ನವ್ಯವಸ್ಥೆಯ ಪ್ರದೇಶಗಳಲ್ಲಿ ಕಡ್ಡಾಯವಾಗಿ ನಿರ್ವಹಿಸಬೇಕಾದ ಕನಿಷ್ಟ ನಾಗರೀಕ ಸೌಲಭ್ಯಗಳು:**

ಈ ಪುರ್ನವಸತಿ ಪ್ರದೇಶದಲ್ಲಿ ಈ ಕೆಳಕಂಡ ಐಟಂಗಳು ಎಲ್ಲಾ ನಿವಾಸಿಗಳಿಗೂ ಲಭ್ಯವಾಗುವಂತೆ ಒದಗಿಸುವುದು.

1. ಸಮುದಾಯ ಭವನ
2. ಪ್ರಾಥಮಿಕ ಆರೋಗ್ಯ ಕೇಂದ್ರ
3. ಪಶುವೈದ್ಯ ಚಿಕಿತ್ಸಾಲಯ
4. ಅಂಗನವಾಡಿ/ಬಾಲವಾಡಿ
5. ಪ್ರಾಥಮಿಕ ಮತ್ತು ಮಧ್ಯಮಿಕ ಶಾಲೆ
6. ಬಾಹ್ಯ ಮತ್ತು ಆಂತರಿಕ ರಸ್ತೆಗಳು
7. ಚರಂಡಿ ಮತ್ತು ಒಳಚರಂಡಿ
8. ಬೀದಿ ದೀಪಗಳು
9. ಶುದ್ಧ ಕುಡಿಯುವ ನೀರಿನ ವ್ಯವಸ್ಥೆ
10. ಬಸ್ ನಿಲ್ದಾಣ
11. ಸ್ಮಶಾನ ಮತ್ತು ವಿದ್ಯುತ್ ಶವಾಗಾರ
12. ಅಂಚೆಕಛೇರಿ/ಬ್ಯಾಂಕ್
13. ಧೋಬಿ ಘಾಟ್/ಬಟ್ಟೆ ಒಗೆಯುವ ಸ್ಥಳಾವಕಾಶ
14. ವಾಣಿಜ್ಯ ಸಂಕೀರ್ಣ/ಅಂಗಡಿಗಳು (ನ್ಯಾಯಬೆಲೆ ಅಂಗಡಿ ಸೇರಿದಂತೆ)
15. ಆಟದ ಮೈದಾನಗಳು/ಉದ್ಯಾನವನಗಳು
16. ಇದಲ್ಲದೆ ಪುರ್ನವಸತಿ ಸಮಿತಿ ನಿಗದಿಸುವ ಇನ್ನಿತರೆ ಸಾರ್ವಜನಿಕ ಸೌಲಭ್ಯಗಳು.

**11. ಇತರೆ ಷರತ್ತು ಮತ್ತು ನಿಬಂಧನೆಗಳು:**

1) ಅಭಿವೃದ್ಧಿದಾರನು ತನ್ನ ಪರವಾಗಿ ಒಬ್ಬ ಪುನರ್‌ವಸತಿ ಮತ್ತು ಪುನರ್ ವ್ಯವಸ್ಥೆಯ ಸಮನ್ವಯ ಅಧಿಕಾರಿಯನ್ನು (R&R Co-ordinator) ನೇಮಿಸುವುದು

2. ಬಿಎಂಆರ್‌ಡಿಎ ನಿರ್ದಿಷ್ಟಪಡಿಸಿದಂಥಹ ವಿಶಿಷ್ಟ ವಿವರಣೆಗಳನ್ವಯ (Specification) ಪುನರ್ ವಸತಿ ಕಾಲೋನಿಯನ್ನು ರಚಿಸಿ ಮನೆಗಳನ್ನು ಕಟ್ಟುವುದು ಹಾಗೂ ಇದಕ್ಕೆ ಸಂಬಂಧಪಟ್ಟ ಎಲ್ಲ ನಾಗರೀಕ ಸೌಲಭ್ಯಗಳನ್ನು ಮಾಡುವುದು ಹಾಗೂ ಇದಕ್ಕೆ ತಗುಲುವ ವೆಚ್ಚವನ್ನು ಅಭಿವೃದ್ಧಿದಾರನೆ (Developer) ಭರಿಸತಕ್ಕದ್ದು.
3. ಇದೆ ತರಹ ಜಮೀನು ಕಳೆದುಕೊಳ್ಳುವ ಭೂ ಮಾಲೀಕರಿಗೆ ಪರಿಹಾರವಾಗಿ ನೀಡಬೇಕಿರುವ ಅಭಿವೃದ್ಧಿಪಡಿಸುವ ನಿವೇಶನಗಳಿಗಾಗಿ ಜಮೀನಿನಲ್ಲಿ ನಾಗರೀಕ ಸೌಲಭ್ಯ ಒಳಗೊಂಡಂತೆ ವಿನ್ಯಾಸ/ರಚನೆಯನ್ನು (Layout for providing compensatory developed land) ಬಿಎಂಆರ್‌ಡಿಎಯು ನಿರ್ದಿಷ್ಟಪಡಿಸಿದಂತೆ ಕಾರ್ಯಗತಗೊಳಿಸುವುದು ಮತ್ತು ಇದರ ವೆಚ್ಚವನ್ನು ಅಭಿವೃದ್ಧಿದಾರನೆ ಭರಿಸತಕ್ಕದ್ದು.
4. ಮೇಲ್ಕಂಡ ಪ್ಯಾಕೇಜಿನಿಂದ ಈ ಯೋಜನೆಯಡಿ ಸ್ಥಳಾಂತರಗೊಳ್ಳುವ ನಿವಾಸಿ/ಕುಟುಂಬಗಳು, ನಗದು ಪರಿಹಾರ ಮತ್ತು ಒತ್ತುವರಿದಾರರಿಗೆ ನೀಡಬೇಕಿರುವ ಪರಿಹಾರಕ್ಕಾಗಿ, ಅಭಿವೃದ್ಧಿದಾರರು (Developer) ಅಭಿವೃದ್ಧಿ ಕರಾರು ಪತ್ರ (Development Agreement) ಸಹಿಯಾದ 30 ದಿನಗಳೊಳಗಾಗಿ ರೂ. 100/– ಕೋಟಿಯನ್ನು (corpus fund) ಎಂದು ಬಿಎಂಆರ್‌ಡಿಎಗೆ ಠೇವಣಿ ಇಡತಕ್ಕದ್ದು. ಅಭಿವೃದ್ಧಿದಾರನು ಈ corpus fund ಖರ್ಚಾದಂತೆ ಕಾಲಕಾಲಕ್ಕೆ ಬಿಎಂಆರ್‌ಡಿಎ ಸೂಚಿಸದಂತೆ ಮತ್ತೆ ಮತ್ತೆ ಭರ್ತಿ ಮಾಡತಕ್ಕದ್ದು.
5. ಬಿಎಂಆರ್‌ಡಿಎಯು ನಿಗದಿಪಡಿಸುವ ಕಾಲಮಿತಿಯೊಳಗೆ ಅಭಿವೃದ್ಧಿದಾರನು ಪುರ್ನವಸತಿ ಕಾಲೋನಿ ಮತ್ತು ಪರಿಹಾರ ರೂಪದಲ್ಲಿ ನೀಡುವ ಅಭಿವೃದ್ಧಿ ಹೊಂದಿದ ಜಮೀನಿನ ವಿನ್ಯಾಸದ ರಚನಾ ಯೋಜನೆಯನ್ನು ಕಾರ್ಯಗತಗೊಳಿಸತಕ್ಕದ್ದು.
6. 1966ನೇ KIADB ಕಾಯ್ದೆಯ ವಿಧಿ 29 (2)ರಂತೆ ಈ ಮೇಲ್ಕಂಡ ಪ್ಯಾಕೇಜುಗಳಲ್ಲಿ ಜಮೀನು ಕಳೆದುಕೊಳ್ಳುವವರಿಗೆ ಅಥವಾ ಈ ಯೋಜನೆಯಿದ ಸ್ಥಳಾಂತರಗೊಳ್ಳುವ ವ್ಯಕ್ತಿ/ಕುಟುಂಬಕ್ಕೆ ಸಿಗುವಂಥಹ ಪ್ಯಾಕೇಜಿನ ಲಾಭಗಳನ್ನು ಪಡೆಯಲು ನಿಗದಿಸಿದ ಕರಾರು ಪತ್ರ (Agreement) ನಷ್ಟ ಭರ್ತಿ ಬಾಂಡ್ (Indemnity Bond) ಜೊತೆಗೆ KIADB ನಿಗದಿಪಡಿಸಿದ ಇತರೆ ದಾಖಲೆಗಳನ್ನು ಹಾಜರುಪಡಿಸತಕ್ಕದ್ದು.

12. **ಅರ್ಥ ವಿವರಣೆ:**

ಈ ಮೇಲೆ ತಿಳಿಸಿದ ಪ್ಯಾಕೇಜಿನ ಯಾವುದೇ ಅಂಶಗಳ ಕುರಿತು ಪ್ರಸ್ತಾಪಿಸಲಾಗುವ ಅನುಮಾನಗಳು / ಅಥವಾ ವಿವರಣೆಗಳ ವಿಚಾರಗಳಲ್ಲಿ ಕರ್ನಾಟಕ ಸರ್ಕಾರದ ನಗರಾಭಿವೃದ್ಧಿ ಇಲಾಖೆಯು ತೆಗೆದುಕೊಳ್ಳುವ ತೀರ್ಮಾನವೆ ಅಂತಿಮವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಪ್ರೇಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## URBAN DEVELOPMENT SECRETARIAT

**Sub:** Development of New Integrated Township at Bidadi in the Bangalore Metropolitan Region (BMR) – Inclusion of additional lands and approval of Land compensation and Rehabilitation Package for project affected persons – reg.

**Read :**
1 Government Order No. UDD 97 BMR 2006 dated 18-10-2006.
2 Letter No. BMRDA / LAQ / 2006-07 dated 13.2.2007 of the Metropolitan Commissioner, BMRDA, Bangalore.

**Preamble:**

In the Government Order dated 18-10-2006, Read at (1) above the Government had earlier conveyed approval for the proposals of BMRDA for development of five integrated townships in the Bangalore Metropolitan Region (BMR) at Bidadi, Ramanagara, Sathanur, Solur and Nadagudi and development of the first Township in Bidadi as a pilot project.

In the letter dated: 13.2.2007 read at (2) above, The Metropolitan Commissioner, Bangalore Metropolitan Region Development Authority has stated that the Bidadi Township Project (BITP) in Bidadi Hobli, Ramanagara Taluka originally approved vide G.O. dated 18.10.2006 included 8 villages Later, during initial survey work, it was found that the village of Mandiahalli in Bidadi Hobli, measuring 92.21 acres, is sandwiched between the project area and the Kanakapura Taluk, measuring 62.36 acres was lying well within the BITP area Commissioner, BMRDA has submitted the following proposals 1) Incorpoation of the whole of Mandlahalli village in Bidadi Hobli measuring 92.21 acres and part of the Vaderahalli village of Harohalli Hobli in Kanakapura Taluk, concepts for the Bidadi Project is the economic integration of the land losers with the project, so that project affected persons (PAPs) should enjoy the

fruits of the economic prosperity ushered in the project area on the sustainable basis 3) That the farmers were not satisfied about the large difference between the guidance values of the lands in A,B,C and D categories and want a closer parity for the same. Hence BMRDA (after discussions with the farmers representatives), has worked out a comprehensive land compensation and relief & rehabilitation package and submitted the same for consideration & approval of Government.

The proposal have been examined and the following orders are issued.

**Government Order No. UDD 30 BMR 2007, Bangalore dated 11th June 2007**

Under the Circumstances explained in Premable, Government is pleased to approve the following proposal of BMRDA;

(i) Incorporation of the whole of Mandlahalli village in Bidadi Hobli measuring 92.21 acres and part of the Vaderahalli village of Harohalli Hobli in Kanakapura Taluk, measuring 62.36 acres additionally in the BITP project area. Revised list of Villages and extent falling in the Bidadi Township Project Area is indicated in Annexure-1

(ii) Land compensation and rehabilitation & resettlement package for project affected persons as indicated in Annexure-2

By order and in the Name of the Governor of Karnataka
**M.S. PREMACHANDRA**
Under Secretary to Government,
Urban Development Department.

**ANNEXURE-1**

**Government Order No: UDD 30 BMR 2007, Bangalore Dated: 11.6.2007**

**Revised list of Villages falling with in the Bidadi Township Project Area and extent (in Acres)**

| Sl. No. | Villages | Private Lands | Govt. Lands | Water Bodies | Total |
|---|---|---|---|---|---|
| 1. | Byramangala | 897.08 | 373.30 | 82.02 | 1353.00 |
| 2. | Bannigiri | 462.30 | 421.09 | 320.20 | 1204.19 |
| 3. | Hosur | 2027.17 | 471.09 | 64.01 | 2562.27 |
| 4. | K.G. Gollarapalya | 221.27 | 95.06 | 33.37 | 350.30 |
| 5. | Kanchugaranahalli | 1185.07 | 328.17 | 62.14 | 1575.38 |
| 6. | Aralalasandra | 1080.25 | 351.21 | 35.25 | 1467.31 |
| 7. | Kempaiyyanapalya | 264.04 | 133.02 | Nil | 397.06 |
| 8. | Kanchugarahahalli Kaval | 87.12 | Nil | 24.09 | 111.21 |
| 9. | Mandlahalli | 47.27 | 24.07 | 20.27 | 92.21 |
| 10. | Vaderahalli | 62.36 | Nil | Nil | 62.36 |
| | **Total** | **6336.33** | **2198.21** | **643.15** | **9178.29** |

By order and in the Name of the Governor of Karnataka
**M.S. PREMACHANDRA**
Under Secretary to Government,
Urban Development Department.

**ANNEXURE-2**

**[to the Government Order No: UDD 30 BMR 2007, Bangalore Dated 11-06-2007]**

**BIDADI INTEGRATED TOWNSHIP PROJECT**

**Land compensation and Rehablilitation & Resettlement Package for Project Displaced Persons and Families-Reg.**

**1. Applicability.**

(a) This customised Land Compensation and Rehabilitation & Resettlement Package is applicable to the project displaced persons / families (PDPs / PDFs) of theBidadi Integraed Township Project (BITP) area and is a unique package, keeping in view the special nature of the project and its location. It shall not be construed as a general package / precedent for any other project / location, which shall be independently formulated and approved by the competent authority.

(b) This package shall be available to the following categories of project displaced familes (PDFs), viz.-

(i) Land owners whose lands are being acquired for the BITP

(ii) Displaced residents / families of the BITP project area including the Gramatanas, whose lose house / site due to the project; and

(iii) Displaced residents / familes not owning any land, house or site.

**2. Definitions:**

(a) **"Displaced Resident"** means any resident person either owning land / house / site in the project area including gramtana or those resident persons not owning any land / house / site and who, for at least three years prior to the date of publication of Notification under Section 28(1) of the Karnataka Industrial Areas Development Act 1966 (the KIAD Act) for the purpose of acquiring any land for the project, has / have ordinarily been residing in, or cultivating land, or carrying on any trade, occupation, or calling or working for personal gain in the BITP project area and who would be, or has been involuntarily displaced from his or her usual place of residence or work due to such land acquisition.

(i) The prescribed minimum three year period of residence in project area including Gramtana would be reckoned on the basis of documentary proof such as voters list, ration cad, bank pass book and such other document(a) as may be prescribed by the rehabilitation committee.

(ii) Land owners who do not ordinarily reside in Gramtana or any dwelling on the land in the project area and are not cultivating the said land will be entitled to only land compensation and cost of structure / malkis thereon and will not be entitled to R&R package.

**(b) Displaced Family"** means the family of the displcd resident, consisting of his or her spouse, minor sons, unmarried daughters, minor brothers or sisters, father and mother and other members of the family residing with him and dependant on him for their livelihood and who reside the project area for a period of at least three years prior to the date of publication of the Notification under Section 28(1) of the KIAD Act 1966, for the purpose of acquiring land (including house / site in gramathana area) for the project.

**(c) "Encroacher"** means a person who is residing without proper title of ownership on Government / Forest / Panchayat land for at least three years prior to the issue of the 28(1) Notification.

**(d) "RTC Holder"** means a project displaced person whose name is entered in the Record of Rights, Tenancy & Crops (RTC) as the owner of the land on the date of the 28(1) Notification. Where there is single name entered in the RTC, it will be known as "Single RTC Holder" and where more than one name is entered in the RTC, it will be known as "Joint RTC Holder.".

**(e) "Co-parceners"** means two adult children of a single RTC Holder who have crossed 18 years of age on the date of the Notification under Section 28(1) of the KIAD Act 1966. In addition, the following are also included as co-parceners:

a) Unmarried daughter who has crossed 18 years of age provided she is the dependant on the single RTC Holder and is residing in the same house.

b) Widowed daughter / daughter-in-law who is wholly dependant on the Single RTC Holder.

c) In cse of Joint RTC Holders, no co-parceners shall be considered.

**(f) "Other Households" means:**

i) PDFs who are non-RTC Holder but have Regular Households

ii) Encroachers on Government / Forest / Panchayat land who lose their house owning to the acquisition of their lands for the BITP.

iii) Familes of agricultural labourers who lose their house and occupation consequent upon the implementation of the BITP.

**(g) "Regular Households"** are those who have house numbers allotted by the respective Gram Panchayats, have a separate kitchen and have record / proof house tax paid to the Panchayat for a period of minimum three years prior to the publication of the 28(1) Notification.

Provided that,-

i) Where the name of PDF appears in more than one category mentioned above, such PDF shall be eligible to opt for only one category.

ii) The house allotted as compensation under this Scheme shall be in the joint names of the wife and husband of the PDFs.

**3. Socio Economic Survey:-** The BITP Developer shall conduct a socio-economic survey of BITP area in consultation with the BMRDA. This survey would be made available to the BMRDA free of cost and to any other person at a reasonable price.

**4. Compensation for residential / commercial properties acquired.**

The BITP envisages acquisition of the gram thanas and relocation of the residens to a properly developed new residential complex. The Project intends to encourage the Project Displaced Persons / Fanmilies to stay within the Project Area in such new residential complex, except for those who would prefer to reallocate elsewhere. With a view to provide an improved quality of life for the bonafide residents of the villages being acquired for the Project, an alternative package shall be offered for as follows.

**A. Compensation in lieu of case for residential / commercial properties acquired in the Grama Thana.**

The residents in the gramathana areas owning residential or commercial properties shall be provided with sites, houses and commercial spaces as follows, as compensation lieu of cash amounts payable under the law.

| Sl. No. | Existing Status in the Grama Thana | Compensation in lieu of cash |
|---|---|---|
| 1. | Dwelling House on site measuring 600 sft or less. | House of 680 sft on a 900 sft site. |
| | Dwelling House on site measuring above 600 but upto 900 sft | House of 680 sft on a 1200 sft site. |
| 2. | Dwelling House on site measuring 900 sft but upto 1200 sft | House of 1200 sft on a 1800 sft site. |
| | Dwelling House on site measuring above 1200 but upto 1800 sft | House of 1200 sft on a 2400 sft site. |
| 3. | Dwelling House on site measuring above 1800 sft but up to 2400 sft | House of 1400 sft on a 3600 sft site. |
| 4. | House on a site larger than 2400 sft | House of 1800 sft on a 3600 sft site. |
| 5. | Only site, without any residential unit built thereon | 150% of the area of the site acquired. |
| 6. | Commercial structures (Shops) | 150% built space of the existing built area. |

Note:

a. The standards of housing would be at par with the houses built by the Karnataka Housing Board in recent times.

b. The cost for malki would be payable additionally as per standard valuation principles or as per agreement.

c. No other compensation would be payable for the land or structure etc.

d. The location of the alternative sites / houses / shops to be given to the project displaced family (PDF) would be determined in consultation with the Developer and BMRDA / Rehabilitation Committee as part of the Township Development Plan and the PDF shall not insist on any particular location in the rehabilitation and resettlement area (the R&R area) for himself / herself.

**B. Transportation & Relocation Grant and Subsistence Allowance.**

In addition to the house / site etc. mentioned in sub-clause A above, every PDP / PDF shall be provided with:-

(i) Rs. 10,000/- (Rupees ten thousand only) as “transportaion & relocation grant” and

(ii) Rs. 20,000/- (Rupees Twently thousand only) as “subsistence allowance (grant)”.

**C. Cash compensation in liew of House / Site / Shop etc.**

The package mentioned in A & B above is only an alternative to the legally entitled compensation amount and is intended to provide a bette quality of life for the Project Displaced Persons / Families (PDP / PDF). Any PDP / PDF desirous of availing cash compensation in lieu of alternative house / site / shop in the R&R area as indicated in paragraphs A & B above, shall be paid value of the house properly acquired including the house site, building / structures and malkies as assessed by the competent authority in terms of the provisions of th KIAD Act.

**D. Compensation for residential / commercial properties acquired outside the Grama Thana.**

In respect of the residential / commercial properties acquired outside the Grama Thana, the compensation payable would be par with B and C above.

**E. Compensation for the displaced residents / families not owning any land / house / site in the project area**

(i) Some displaced residents families of the villages in the project area do not won any house, house site or agricultural lands. These are asset-less displaced residents / families who live on tenanted properties and do not have any legal claims of

compensation. However, as a social commitment, for such landless / houseless / siteless project displaced residents / familes, assured rental housing shall be provided by the Developer. The rates of rent would be fixed by the Developer in consultation with the Rehabilitation Committee and BMRDA and would bebased on the concept of "capacity to pay".

(ii) **Financial Assistance to the asset-less project displaced residents / familes:-** Apart from rental housing every asset-less project displaced family (PDF) would be provided with an one time financial assistance of Rs. 30,000/- (Rupees Thirty thousand only).

**5. Compensation for Agricultural Lands:-**

Two alternative options of compensation for the lose of the agricultural lands are made available to the land losers in the BITP project area, namely:-

**A. Cash Compensation for Agricultural Lands:-**

(Rs. In Lakh per acre)

| Category | Definition | Khushki | Tari | Bagayath |
|---|---|---|---|---|
| A | Lands close to Regional Highways | 22.00 | 23.00 | 25.00 |
| B | Lands close to Gramathana and Village Road | 21.00 | 22.00 | 23.00 |
| C | Lands close to village roads | 20.00 | 21.00 | 22.00 |
| D | Lands in interior / without road access | 20.00 | 21.00 | 22.00 |

The cost of malki and structures would be payable additionally as per standard valuation principles.

**OR**

**B. Compensation by way of developed land for agricultural lands surrendered:-**

Developed land measuring 8,000 (Eight thousand) sq. ft for every acre of land acquired without discriminating between khushki, tari and bagayath lands shall be provided. This will in lieu of the cash compensation for the land. The cost for malki and structures would be payable additionally as per standard valuation principles. The location of developed land to be given to the land loser would be determined by the Developer in consultation with the BMRDA as part of the township development pland and the land loser would not insist on any particular portion of the project area for himself/herself.

**6. Compensation for the Encroacher.**

The encroacher on Government / Forest / Panchayat land if any, as defined in para 2 (c) above, be it used by him for residential, commercial or agricultural purposes, is not entitled for any compensation for loss of such encroached land. He shall, however, be paid reasonable compensation in cash for the improvements, such as buildings and structures, effected by him on such encroached land.

**7. Agreements.**

The alternative modes of compensation indicated in Clauses 4,5,6 and 7 above are offered as an alternative to the normal cash compensation payable under the law inclusive of the amounts of interest etc. PDPs/ PDFs opting for such alternative compensation shall sign individual written agreements with the competent authority relinquishing their right to seek cash compensation under the relevant Act (KIAD Act etc) including interest and other similar amounts.

**8. Guidelines for relocation of places of worship.**

(i) The Developer shall provide a replacement site to the extent required as prescribed by the Rehabilitation Committee to shift the places of worship.

(ii) Construction expenses as determined by the Rehabilitation Committee in respect of each case shall be provided by the Developer.

(iii) In addition, a separate grant shall be provided for shifting / relocation of Idol on a case to case basis, as decided by the Rehabilitation Committee.

**9. Rehabilitation Committee.**

A "Rehabilitation Committee" under the chairmanship of Deputy Commissioner, Bangalore (Rural) Districtis constituted as under, with a view of oversee the rehabilitation activities:-

- Deputy Commissioner, Bangalore (Rural) District – chairman
- Special Deptuy Commissioner, KIADB
- Deputy Metropolitan Commissioner, BMRDA
- CEO, Zilla Panchayat, Bangalore (Rural) District
- District Social Welfare Officer, Bangalore (Rural) District
- District Officer for Backward Classes & Minorities, Bangalore (Rural) District
- District Officer, Women & Child Welfare, Bangalore (Rural) District

